ಉಪನ್ಯಾಸ
ಗ್ರಂಥಮಾಲೆ

೨೨೨

# ಶ್ರಮಜೀವಿಗಳ ಕಲ್ಯಾಣ

ಎಂ. ಸಿ. ಹಿಪ್ಪರಗಿ,
ಬಿ.ಎ.(ಸ್ಪೇಶಲ್), ಎಂ. ಕಾಮ್.(ಕಾಸ್ಟ).




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯೭೩

ರಜತ ಮಹೋತ್ಸವದ ಪ್ರಕಟನೆ

ಉಪನ್ಯಾಸ ಗ್ರಂಥಮಾಲೆ

೨೨೨

# ಶ್ರಮಜೀವಿಗಳ ಕಲ್ಯಾಣ


ಎಂ. ಸಿ. ಹಿಪ್ಪರಗಿ,

ಬಿ. ಎ. (ಸ್ಪೇಶಲ್), ಎಂ. ಕಾಮ್. (ಕಾಸ್ಟ).








ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

ನವ್ಹೆಂಬರ, ೧೯೭೪

ಪ್ರಕಾಶಕರು:
ಎಸ್. ಎಸ್. ಒಡೆಯರ ಎಂ.ಎ.,ಎಲ್ ಎಲ್.ಬಿ.
ಕುಲಸಚಿವರು
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು
ನವ್ಹೆಂಬರ, ೧೯೬೫



ಬೆಲೆ : ೨೫ ಪೈಸೆ

ಮುದ್ರಕರು :
ಶ್ರೀಮತಿ ಶಾಂತಾ ಎಚ್. ಬಳೂಟಗಿ,
ಶಿವಾನಂದ ವರ್ಕ್ಸ್, ಜವಳಿಪೇಟ,
ಧಾರವಾಡ

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗವಿಸ್ತರಣ ಹಾಗೂ ಪ್ರಕಟನ ಶಾಖೆಯ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯಕ್ಕೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಾಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಉಪನ್ಯಾಸಮಾಲೆಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನ ಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗು ವದಲ್ಲದೆ ಎಂಥ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯ ಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವ ರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೆ ೨೨೧ ಪುಸ್ತಕಗಳು ಪ್ರಕಟವಾಗಿವೆ. ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನ ಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗ ತಿಯ ಚಿನ್ಹೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋ-ಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೧೪-೧೧-೧೯೭೫

ಆರ್. ಸಿ. ಹಿರೇಮಠ
ಕುಲಪತಿಗಳು

# ಅರಿಕೆ

ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಹಾಗೂ ಪ್ರಕಟನ ಶಾಖೆಯವರು ಬಳ್ಳಾರಿ ಜಿಲ್ಹೆಯ ಚಿಕ್ಕ ಜೋಗಿಹಳ್ಳಿಯಲ್ಲಿ ೧೯೭೪ರ ಡಿಸೆಂಬರ ೨೧ರಂದು ಏರ್ಪಡಿಸಿದ ಉಪನ್ಯಾಸ ಶಿಬಿರದಲ್ಲಿ "ಶ್ರಮಜೀವಿಗಳ ಕಲ್ಯಾಣ" ಎಂಬ ವಿಷಯವನ್ನು ಕುರಿತು ನಾನು ಮಾತನಾಡಿದೆ. ಅಂದಿನ ಭಾಷಣದ ಮೂಲ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಈ ಪುಸ್ತಕವನ್ನು ಸಿದ್ಧಪಡಿಸಲಾಗಿದೆ.

"ಪ್ರತಿ ಜೀವಿಯ ಸಂಪತ್ತು ದೇಶದ ಸಂಪತ್ತು". ಈ ಸಂಪತ್ತನ್ನು ಹಾಗೆಯೇ ಹೋಗಗೊಡಬಾರದು. ಅದರಿಂದ ದೇಶಕ್ಕೆ ಅಪಾರವಾದ ಹಾನಿಯಾಗುವದುಂಟು. ಶ್ರಮಜೀವಿಯ ಶ್ರಮವನ್ನು ಬಳಸಿಕೊಳ್ಳುವದೂ ಅದರ ಜೊತೆಗೆ ಉತ್ಪಾದನೆಯನ್ನು ಹೆಚ್ಚಿಸುವದೂ ಅವಶ್ಯವಿರುವದು.

ಭಾರತವು ಗ್ರಾಮೀಣ ಮತ್ತು ಕೃಷಿ ಆಧಾರಿತ ಸಮಾಜದಿಂದ ನಗರೀಕೃತ ಕೈಗಾರಿಕಾ ಆಧಾರಿತ ಸಮಾಜವಾಗಿ ಪರಿವರ್ತನೆಯನ್ನು ಹೊಂದುತ್ತಿರುವದು. ಗ್ರಾಮಾಂತರ ಪ್ರದೇಶದ ಶ್ರಮಜೀವಿಗಳು ಸುಲಭವಾಗಿ ಕೈಗಾರಿಕೆಯ ಜೀವನಕ್ಕೆ ಹೊಂದಿಕೊಳ್ಳುವಂತೆ ಅನುಕೂಲತೆಯನ್ನು ಒದಗಿಸಿದರೆ, ಅವರು ಕೈಗಾರಿಕೆಯ ಕೇಂದ್ರಗಳಲ್ಲಿ ಸ್ಥಿರವಾಗಿ ನಿಂತರೆ, ಔದ್ಯೋಗಿಕ ಶಾಂತಿಯು ದೊರೆಯುತ್ತದೆ. ಇದರಿಂದ ದೇಶದ ಉತ್ಪಾದನೆಯು ಹೆಚ್ಚುವದು. ಹಣದ ಉಬ್ಬರವು ಕಡಿಮೆಯಾಗಿ ಮಾರುಕಟ್ಟೆಯ ಬೆಲೆಗಳು ಇಳಿಯಲು ಸಾಧ್ಯವಾಗುತ್ತದೆ.

ಮತ್ತು ಜನಸಾಮಾನ್ಯ ತನ್ನಲ್ಲಿರುವ ಸ್ವಲ್ಪೇ ಆರ್ಥಿಕ ಸಂಪನ್ಮೂಲದಿಂದ ಹೆಚ್ಚಿನ ತೃಪ್ತಿಯನ್ನು ಪಡೆಯಲು ಸಾಧ್ಯವಾಗುವದು. ಈ ಎಲ್ಲ ವಿಷಯಗಳನ್ನು ಈ ಪುಸ್ತಿಕೆಯಲ್ಲಿ ಸಂಕ್ಷಿಪ್ತವಾಗಿ ಪರಿಶೀಲಿಸಲಾಗಿದೆ.

ವ್ಯಾಸಂಗ ವಿಸ್ತರಣ ಉಪನ್ಯಾಸ ಶಿಬಿರದಲ್ಲಿ ಭಾಷಣಕ್ಕೆ ಆಮಂತ್ರಿಸಿ ನನ್ನ ಉಪನ್ಯಾಸವನ್ನು ಪುಸ್ತಕದ ರೂಪದಲ್ಲಿ ಪ್ರಕಟಿಸುತ್ತಿರುವ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ನನ್ನ ವಂದನೆಗಳು. ಹಸ್ತಪ್ರತಿಯನ್ನು ಓದಿ ಸೂಕ್ತ ಸಲಹೆಗಳನ್ನಿತ್ತ ಹಿರಿಯ ಮಿತ್ರ ಪ್ರೊ. ಎಸ್. ಎಸ್. ಹಂದೂರರವರಿಗೂ ಮತ್ತು ನನ್ನ ಹಿರಿಯ ಸಹೋದರ ಪ್ರಿ. ಜಿ ಸಿ. ಹಿಪ್ಪರಗಿ ಅವರಿಗೂ ನನ್ನ ಅನಂತ ಕೃತಜ್ಞತೆಗಳು.

ಗ್ರಂಥ ಪ್ರಕಟನೆಯ ವಿಷಯದಲ್ಲಿ ಆಸ್ಥೆ ವಹಿಸಿದ ಪ್ರಕಟನ ವಿಭಾಗದ ನಿರ್ದೇಶಕರಾದ ಶ್ರೀ ಚೆನ್ನವೀರ ಕಣವಿಯವರಿಗೂ, ಉಪನಿರ್ದೇಶಕರಾದ ಶ್ರೀ ಎಸ್. ಬಿ. ನಾಯಕರವರಿಗೂ ಹಾಗೂ ಸಹಾಯಕ ನಿರ್ದೇಶಕರಾದ ಶ್ರೀ ಎಲ್. ಎಮ್. ಗುಡ್ಡೀನರವರಿಗೂ ಈ ಸಂದರ್ಭದಲ್ಲಿ ನನ್ನ ವಂದನೆಗಳನ್ನು ಸಲ್ಲಿಸದೇ ಇರಲಾರೆ.

ಬಿ. ಆರ್. ಬಿ. ವಾಣಿಜ್ಯ
ಮಹಾವಿದ್ಯಾಲಯ,
ರಾಯಚೂರು
೧-೧೧-೧೯೭೫

ಎಮ್. ಸಿ. ಹಿಪ್ಪರಗಿ

# ಪರಿವಿಡಿ

ಮುನ್ನುಡಿ .... iii
ಅರಿಕೆ .... v
೧. ಶ್ರಮಜೀವಿಗಳು ... ೧
೨. ಶ್ರಮಜೀವಿಗಳ ಕಲ್ಯಾಣ, ಅದರ ಅವಶ್ಯಕತೆ .... ೬
೩. ಶ್ರಮಜೀವಿಗಳ ಕಲ್ಯಾಣ ಕಾರ್ಯದ ವಿಂಗಡಣೆ .... ೧೭
೪. ಐಚ್ಛಿಕ ಕಲ್ಯಾಣ ಕಾರ್ಯಗಳು .... ೧೯
೫. ಕಾನೂನಿಗನುಸಾರವಾಗಿ ನಡೆಯುವ ಕಲ್ಯಾಣ ಕಾರ್ಯಗಳು .... ೩೪
೬. ಒಕ್ಕಲುತನ ಕಾರ್ಮಿಕರು .... ೫೮
೭. ಯಾರ ಹೊಣೆಗಾರಿಕೆ? .... ೬೬
ಗ್ರಂಥಋಣ ... ೭೦

# ೧. ಶ್ರಮಜೀವಿಗಳು

ಇಂದು ಭಾರತವು ಆರ್ಥಿಕ ರಂಗದಲ್ಲಿ ಅತಿ ಪ್ರಸರಣೆಯನ್ನು ಪಡೆದಿರುವದು. ಕಳೆದೆರಡು ವರುಷಗಳಲ್ಲಿ ಹಣದ ಪೂರೈಕೆಯು, ಸುಮಾರು ಶೇ. ೩೦ ರಷ್ಟು ಹೆಚ್ಚಿರುವದು. ವಸ್ತುವಿನ ಪೂರೈಕೆಯು ಕಡಿಮೆಯಾಗಿ ದೇಶದಲ್ಲಿ ಅಭಾವವು ತಲೆದೋರಿರುವದು. ಔದ್ಯೋಗಿಕ ಉತ್ಪಾದನೆಯು ನಿಂತಲ್ಲಿಯೇ ನಿಂತಿರುತ್ತದೆ. ಒಕ್ಕಲುತನವಂತೂ ಅತ್ಯಂತ ಕನಿಷ್ಠಕ್ಕೆ ಗುರಿಯಾಗಿರುತ್ತದೆ. ಈ ಆರ್ಥಿಕ ಮುಗ್ಗಟ್ಟಿಗೆ ಅನೇಕ ಕಾರಣಗಳನ್ನು ಕೊಡಬಹುದು. ಅಂಥವುಗಳಲ್ಲಿ ಶ್ರಮಜೀವಿಯಿಂದ ಉತ್ಪಾದನೆಯಾಗಬಹುದಾದ ಪ್ರಮಾಣದಷ್ಟು ವಸ್ತುವಿನ ಉತ್ಪಾದನೆಯು ಆಗದೇ ಇರುವದು ಅಥವಾ ಅವರ ಉತ್ಪಾದನೆಯು ಹೆಚ್ಚದೇ ಇರುವದು ಪ್ರಮುಖ ಕಾರಣಗಳಲ್ಲಿ ಒಂದೆಂದೂ ಹೇಳಬಹುದು.

ದೇಶದಲ್ಲಿ ಉತ್ಪಾದನೆಯು ಹೆಚ್ಚುವದರಿಂದ ಹಣದ ಉಬ್ಬರವು ಕಡಿಮೆಯಾಗಿ ಮಾರುಕಟ್ಟೆಗಳಲ್ಲಿ ಬೆಲೆಗಳು ಇಳಿಯುವವು. ಬಡವರ ಬವಣೆಯು ಕಡಿಮೆಯಾಗಿ ದೇಶದ ಸಾಂಪತ್ತಿಕ ಸ್ಥಿತಿಯು ಸುಧಾರಿಸುವದು. ಅದಕ್ಕಾಗಿ ಶ್ರಮಜೀವಿಗಳು ಹೆಚ್ಚಿನ ಪ್ರಮಾಣದಿಂದ ವಸ್ತುವಿನ ಉತ್ಪಾದನೆಯನ್ನು ಮಾಡಿದರೆ ಮತ್ತು ತಮ್ಮ ಉತ್ಪಾದನಾ ಶಕ್ತಿಯನ್ನು ಹೆಚ್ಚಿಸಿಕೊಂಡರೆ ದೇಶದ ಆರ್ಥಿಕ ಪರಿಸ್ಥಿತಿ ಸುಧಾರಿಸಿ ಸರ್ವತೋಮುಖವಾದ ಅಭಿವೃದ್ಧಿಗೆ ಮಾರ್ಗ ಮಾಡಿಕೊಟ್ಟಂತಾಗುತ್ತದೆ.

## ಶ್ರಮಜೀವಿಗಳು ಎಂದರೆ ಯಾರು ?

ವ್ಯಕ್ತಿಯಿಂದ ದೈಹಿಕವಾಗಿಯಾಗಲೀ, ಅಥವಾ ಬೌದ್ಧಿಕವಾಗಿಯಾಗಲೀ ಅಥವಾ ಯಾವುದೇ ಕಾರ್ಯವು ಹಣಕ್ಕಾಗಿ ಅಥವಾ ಹಣದ ಪಾವತಿಗಾಗಿ ನಡೆದದ್ದಾದರೆ ಅದಕ್ಕೆ ಶ್ರಮ (Labour) ಎಂದು ಕರೆಯುತ್ತಾರೆ. ಈ ಶ್ರಮವು ವ್ಯಕ್ತಿಯಿಂದ ನಡೆಯುವದರಿಂದ ಅವನನ್ನು ಶ್ರಮಜೀವಿಯೆಂದು ಕರೆಯಬಹುದು.

ಶ್ರಮಜೀವಿಗಳನ್ನು ಮುಖ್ಯವಾಗಿ ಎರಡು ವಿಧವಾಗಿ ವಿಂಗಡಿಸಬಹುದು. ಒಂದು ದೈಹಿಕ, ಮತ್ತೊಂದು ಬೌದ್ಧಿಕ.

ದೈಹಿಕ ಶ್ರಮಜೀವಿಗಳೆಂದರೆ ಗೋಡೆಯನ್ನು ಕಟ್ಟುವವರು, ಕಾರು ರಿಪೇರಿ ಮಾಡುವವರು, ವಾಹನಗಳ ಚಾಲಕರು

ರಹದಾರಿಯ ಪೋಲಿಸರು ಮುಂತಾದವರನ್ನು ಉದಾಹರಿಸಬಹುದು. ಅವರು ಹಣದ ಪಾವತಿಗಾಗಿ, ಶಾರೀರಿಕ ಶ್ರಮದಿಂದ ದುಡಿಯುವರು. ಬೌದ್ಧಿಕ ಶ್ರಮಜೀವಿಗಳೆಂದರೆ, ಡಾಕ್ಟರರು, ಇಂಜನಿಯರರು, ಪ್ರಾಧ್ಯಾಪಕರು, ಸಂಶೋಧಕರು, ವಿಜ್ಞಾನಿಗಳು ಮುಂತಾದವರನ್ನು ನಾವು ಉದಾಹರಿಸಬಹುದು. ಅವರಿಂದ ಶಾರೀರಿಕ ಶ್ರಮವು ನಡೆಯುವದಿಲ್ಲ; ನಡೆದರೂ ಅಲ್ಪ.

ಶ್ರಮಜೀವಿಯ ಸೇವೆಯು ವಸ್ತುವಿನ ಉತ್ಪಾದನೆಯಲ್ಲಿ ಸರಿಯಾಗಿ ವಿನಿಯೋಗವಾಗಬೇಕು. ಅದಕ್ಕಾಗಿ ಉದ್ಯೋಗಪತಿಯು ಯೋಗ್ಯವಾದ, ಜವಾಬ್ದಾರಿಯುತ ಯೋಜನೆಯನ್ನು ಸಿದ್ಧಪಡಿಸಬೇಕು. ಮತ್ತು ಶ್ರಮಿಕರಿಗೆ ಯೋಗ್ಯ ಮಾರ್ಗದರ್ಶನವನ್ನು ಕೊಡಬೇಕು. ಯಾಕೆಂದರೆ ಶ್ರಮವು ವೇತನದಲ್ಲಿ, ಜ್ಞಾನದಲ್ಲಿ, ಕುಶಲತೆಯಲ್ಲಿ, ತರಬೇತಿಯಲ್ಲಿ ವ್ಯಕ್ತಿ ವ್ಯಕ್ತಿಗೆ ಬೇರೆಯಾಗಿರುತ್ತದೆ. ಶ್ರಮಜೀವಿಯು ಯಂತ್ರವಲ್ಲ. ಅವನ ಗುಣಗಳನ್ನು ಮತ್ತು ಸಂಚಾರವನ್ನು ಶೀಘ್ರಗತಿಯಲ್ಲಿ ಬದಲಾವಣೆ ಮಾಡಲು ಬರುವದಿಲ್ಲ.

"ಪ್ರತಿ ಜೀವಿಯ ಶ್ರಮವು ದೇಶದ ಸಂಪತ್ತು" ಎಂದು ಅರ್ಥಶಾಸ್ತ್ರ ಪಿತಾಮಹ ಆಡಮ್ ಸ್ಮಿತ್ ಹೇಳಿರುವದು ಸತ್ಯಾಂಶದಿಂದ ಕೂಡಿರುವದು. ಈ ಶ್ರಮಸಂಪತ್ತಿನಿಂದ ವ್ಯಕ್ತಿಯು ತನ್ನ ಜೀವನಕ್ಕೆ ಅವಶ್ಯವಿರುವದನ್ನು ಪಡೆಯಲು

ಸಾಧ್ಯವಾಗುವದು. ಇದರಿಂದ ಶ್ರಮಜೀವಿಯ ಉಪಯುಕ್ತತೆಯನ್ನು ಅರಿಯಬಹುದು. ೧೯ನೆಯ ಶತಮಾನದ ಕೊನೆಗೆ ಈ ಕ್ರಿಯೆಗೆ ಪ್ರತಿಕ್ರಿಯೆಯು ಪ್ರಾರಂಭವಾಯಿತಲ್ಲದೇ ಅದಕ್ಕೆ ಮುಂಚೆ ಜಗತ್ತಿನ ಯಾವ ರಾಷ್ಟ್ರವೂ ಶ್ರಮಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟಿರಲಿಲ್ಲ. ಮುಂದೆ ೨೦ ನೆಯ ಶತಮಾನದಲ್ಲಿ ಸಮಾಜವಾದೀ ಮತ್ತು ಸಮಾಜವಾದೀ ಪರ ರಾಷ್ಟ್ರಗಳು ಈ ಶ್ರಮಜೀವಿಗಳ ಹಕ್ಕನ್ನು ಎತ್ತಿಹಿಡಿದವು.

## ಶ್ರಮಜೀವಿಗಳ ಸಮಸ್ಯೆಗಳು

ಶ್ರಮಜೀವಿಗಳ ಸಮಸ್ಯೆಗಳನ್ನು ನಾಲ್ಕು ವಿಧವಾಗಿ ವಿಂಗಡಿಸಬಹುದು:

೧) ಕಾರ್ಮಿಕರು ದಿನದಲ್ಲಿ ಕೆಲ ನಿರ್ದಿಷ್ಟ ಗಂಟೆಗಳ ವರೆಗೆ ಮಾತ್ರ ಕೆಲಸವನ್ನು ಮಾಡುವದು. ಅನಾರೋಗ್ಯ ಮತ್ತು ಅಪಘಾತಗಳಿಂದಾಗಿ ಈ ಕೆಲಸಕ್ಕೆ ತಡೆಯನ್ನುಂಟು ಮಾಡುವದು. ಮಕ್ಕಳು ಮತ್ತು ಹೆಂಗಸರು ಅಂತಹ ಸ್ಥಾನದಲ್ಲಿ ಕೆಲಸ ಮಾಡುವದನ್ನು ನಿರ್ಬಂಧಿಸುವದು.

೨) ಉದ್ದಿಮೆಗಳಿಗೆ ಸತತವಾಗಿ ಕಾರ್ಮಿಕರು ಪೂರೈಕೆಯಾಗುವಂತೆ ನೋಡುವದು.

೩) ಕೂಲಿಯ ಸರಿಯಾದ ವಿತರಣೆ, ಆರ್ಥಿಕ ಮುಗ್ಗಟ್ಟಿನಿಂದ ಕಾರ್ಮಿಕರನ್ನು ಮತ್ತು ಅವರ ಮಕ್ಕಳನ್ನು

ಸಂರಕ್ಷಿಸುವದು.

೪) ಆಡಳಿತದಲ್ಲಿ ಕಾರ್ಮಿಕರ ಸಂಬಂಧವನ್ನು ಸುಧಾರಿಸುವದು. ಅವರ ಹಿತಸಂಬಂಧವು ಸರಿಯಾಗಿ ನಡೆಯುವಂತೆ ನೋಡಿಕೊಳ್ಳುವದು.

ಅವರ ಸಮಸ್ಯೆಗಳಿಗೆ ಯೋಗ್ಯಪರಿಹಾರವನ್ನು ಕಂಡು ಹಿಡಿಯುವದು ಅವಶ್ಯವಿರುವದು. ಅಂತಹ ಪರಿಹಾರ ಕ್ರಮಗಳನ್ನು ಕೈಕೊಳ್ಳುವಲ್ಲಿ ಶ್ರಮಜೀವಿಗಳ ಕಲ್ಯಾಣವು ಅತಿ ಪ್ರಮುಖವಾದದ್ದು.

# ೨. ಶ್ರಮಜೀವಿಗಳ ಕಲ್ಯಾಣ, ಅದರ ಅವಶ್ಯಕತೆ

ಶ್ರಮಜೀವಿಗಳ ಕಲ್ಯಾಣದ ಬಗೆಗೆ ವ್ಯಾಖ್ಯೆಯನ್ನು ಕೊಡುವದು ಅಷ್ಟೇನೂ ಸುಲಭವಲ್ಲ. ಅದು ಒಂದು ರಾಷ್ಟ್ರದಿಂದ ಮತ್ತೊಂದು ರಾಷ್ಟ್ರಕ್ಕೆ ಬದಲಾವಣೆಯನ್ನು ಹೊಂದುತ್ತದೆ. ಉದಾಹರಣೆಗೆ ಅಭಿವೃದ್ಧಿಪರ ರಾಷ್ಟ್ರದಲ್ಲಿ ಶ್ರಮಜೀವಿಗಳಿಗೆ ಆಹಾರ ಪೂರೈಕೆಯು ಕಲ್ಯಾಣಕಾರ್ಯವೆನಿಸುವದಿಲ್ಲ. ಆದರೆ ಅದೇ ಅನಭಿವೃದ್ಧ ರಾಷ್ಟ್ರದಲ್ಲಿ ಕಲ್ಯಾಣಕಾರ್ಯವೆನಿಸುವದು. ಆದುದರಿಂದ ಒಂದು ದೇಶದ ಆಚಾರ, ವ್ಯವಹಾರ ಸಾಮಾಜಿಕ ಸಂಸ್ಥೆಗಳು, ಕೈಗಾರಿಕೆ, ಆರ್ಥಿಕ ಅಭಿವೃದ್ಧಿಯ ಹಂತ ಇರುವಿಕೆ ಮುಂತಾದವುಗಳು ಅದಕ್ಕೆ ಕಾರಣವಾಗಿರುತ್ತವೆ.

ಶ್ರಮಜೀವಿಗಳ ಕಲ್ಯಾಣವೆಂದರೆ ಅವರಿಗೆ ಅನುಕೂಲಕರವಾದ ಆವಶ್ಯಕ ಸೌಲಭ್ಯಗಳನ್ನು ಒದಗಿಸುವದೇ ಆಗಿರುತ್ತದೆ. ಶ್ರಮಜೀವಿಗಳ ಜೀವನ ವಿಕಾಸವು ದೈಹಿಕ ಮತ್ತು ಆರ್ಥಿಕ ಬೆಳವಣಿಗೆ, ವಿಧೇಯತೆ, ಗೌರವತೆಯನ್ನು ಹೆಚ್ಚಿಸುವದು ಮುಂತಾದವುಗಳೆಲ್ಲವೂ ಕಲ್ಯಾಣಕಾರ್ಯಗಳೆಂದು ಹೇಳಬಹುದು. ಅಂತಹ ಕಾರ್ಯವು ಸರಕಾರದಿಂದಲೇ ನಡೆಯಲಿ, ಐಚ್ಛಿಕವಾದ ಸಂಸ್ಥೆಯಿಂದಲೇ ನಡೆಯಲಿ, ಉದ್ಯೋಗಪತಿಯಿಂದಲೇ ನಡೆಯಲಿ, ಕಾರ್ಮಿಕ ವರ್ಗದಿಂದಲೇ ನಡೆಯಲಿ, ಅವುಗಳೆಲ್ಲವನ್ನೂ ಶ್ರಮಜೀವಿಗಳ ಕಲ್ಯಾಣವೆಂದು ಕರೆಯಬಹುದು.

ಇದರಲ್ಲಿ ವಸತಿ, ವಿದ್ಯಾಭ್ಯಾಸ, ಆರೋಗ್ಯ ಅನುಕೂಲತೆ ತಿಂಡಿ, ತಿನಸು, ವಿಶ್ರಾಂತಿ, ಶಿಶುವಿಹಾರಗಳು, ಸಹಕಾರಿ ಸಂಘಗಳು, ಪಗಾರದೊಂದಿಗೆ ರಜೆಯನ್ನು ಪಡೆಯುವದು, ನಿರ್ಮಲೀಕರಣ, ವಿಮೆಯೊಂದಿಗೆ ದೊರೆಯಬಹುದಾದ ಲಾಭಗಳು, ಭವಿಷ್ಯನಿಧಿ, ಪ್ರಸೂತಿಯ ಲಾಭ ಮುಂತಾದವುಗಳನ್ನು ಸೇರಿಸಬಹುದು.

ಶ್ರಮಜೀವಿಯ ಉದ್ಯೋಗ ಪರಿಸ್ಥಿತಿಯನ್ನು ಸುಧಾರಿಸುವ ಮತ್ತು ಅವರಿಗೆ ಸೌಲಭ್ಯವನ್ನು ಒದಗಿಸುವ ಎಲ್ಲ ಯೋಜನೆಗಳು ಕಾರ್ಮಿಕ ಕಲ್ಯಾಣದ ಕಾರ್ಯವೆಂದು ಹೇಳಬಹುದು. ಅಂತರ್ರಾಷ್ಟ್ರೀಯ ಕಾರ್ಮಿಕ ಸಂಸ್ಥೆಯು ಇದನ್ನು ಒಪ್ಪುತ್ತದೆ.

ಅಂತರ್ರಾಷ್ಟ್ರೀಯ ಕಾರ್ಮಿಕ ಸಂಸ್ಥೆಯು ೧೯೫೬ರಲ್ಲಿ ನಡೆದ ತನ್ನ ೩೯ನೆಯ ಅಧಿವೇಶನದಲ್ಲಿ ಈ ಕೆಳಗಿನ ಸೌಲಭ್ಯಗಳನ್ನು ಕಾರ್ಮಿಕರಿಗೆ ದೊರಕಿಸಬೇಕೆಂದು ಹೇಳುತ್ತದೆ:

೧) ಉದ್ದಿಮೆಯ ಕೇಂದ್ರದಲ್ಲಿ ಮತ್ತು ಅದರ ನೆರೆಹೊರೆಯಲ್ಲಿ ಕಾರ್ಮಿಕರಿಗೆ ಆಹಾರದ ಅನುಕೂಲತೆಯನ್ನು ಒದಗಿಸಬೇಕು.

೨) ವಿಶ್ರಾಂತಿ ಮತ್ತು ಮನರಂಜನೆಯ ಅನುಕೂಲತೆಗಳನ್ನು ಮಾಡಿಕೊಡಬೇಕು.

೩) ಸಾರ್ವಜನಿಕ ಸಾರಿಗೆಯು ಅಷ್ಟು ಸಮರ್ಪಕವಿಲ್ಲದೇ ಇದ್ದರೆ, ಅವರ ಮನೆ ಮತ್ತು ಉದ್ಯೋಗದ ಸ್ಥಾನಗಳಿಗೆ ಸಾರಿಗೆ ಸೌಲಭ್ಯವನ್ನು ಒದಗಿಸಿಕೊಡಬೇಕು. ಕಾರ್ಮಿಕ ಸಂಶೋಧನಾ ಸಂಸ್ಥೆಯಿಂದಾಗಲೀ ಮಾಲೀಕನಿಂದಾಗಲೀ ಕಾರ್ಮಿಕನಿಂದಾಗಲೀ ಅಥವಾ ಮೂರನೆಯವರಿಂದಾಗಲೀ ಶ್ರಮಜೀವಿಗಳ ಬೌದ್ಧಿಕ, ಆರ್ಥಿಕ, ನೈತಿಕ, ಬೆಳವಣಿಗೆಯು ಆಗುವದಾದರೆ, ಅಂತಹ ಎಲ್ಲ ಬೆಳವಣಿಗೆಗಳು ಶ್ರಮಜೀವಿಗಳ ಕಲ್ಯಾಣವೆನಿಸುತ್ತದೆ.

ಶ್ರಮಜೀವಿಗಳ ಕಲ್ಯಾಣವನ್ನು ಕಾರ್ಮಿಕ ಕಲ್ಯಾಣವೆಂದು ಕರೆಯಬಹುದು.

## ಶ್ರಮಜೀವಿಗಳ ಕಲ್ಯಾಣದ ಅವಶ್ಯಕತೆ

ಶ್ರಮಜೀವಿಗಳ ಪರಿಸ್ಥಿತಿಯು ಅತಿ ಶೋಚನೀಯವಾಗಿರುತ್ತದೆ. ಇಂದಿಗೂ ಶೇ. ೭೫ರಷ್ಟು ಜನರು, ಒಕ್ಕಲುತನದ ಮೇಲೆಯೇ ಅವಲಂಬಿಸಿರುತ್ತಾರೆ. ಭಾರತದಲ್ಲಿಯ ಒಕ್ಕಲುತನವಂತೂ ಒಂದು ಜೂಜು ಇದ್ದಂತೆ. ಮನ್ಸೂನ ಮಳೆಯ ಮೇಲೆ ಅದು ಸಂಪೂರ್ಣವಾಗಿ ಅವಲಂಬಿತವಾಗಿರುತ್ತದೆ. ಮಳೆಯು ಸರಿಯಾಗಿ ಆದರೆ ಅವನು ರಾಜ, ಇಲ್ಲದಿದ್ದರೆ ಅವನು ಭಿಕಾರಿ. ಈ ರಾಜ ಅಥವಾ ಭಿಕಾರಿಯ ಮೇಲೆಯೇ ಕಾರ್ಮಿಕನ ಪರಿಸ್ಥಿತಿಯು ಅವಲಂಬಿಸಿರುವದು. ಹೀಗಾಗಿ ಶ್ರಮಜೀವಿಯು ಅಸ್ಥಿರ ಪರಿಸ್ಥಿತಿಯಲ್ಲಿ ಇರುವನು.

ಶ್ರಮಜೀವಿಯು ಅಂತಹ ಅಸ್ಥಿರತೆಯಿಂದಲೋ, ಅವಿಭಕ್ತ ಕುಟುಂಬ ಪದ್ಧತಿಯಿಂದಲೋ, ಅಣ್ಣತಮ್ಮಂದಿರು ಬೇರೆಯಾಗುವಾಗ ಬಂದಿರುವ ತುಂಡು ಜಮೀನಿನಿಂದಲೋ ಮತ್ತಾವ ಕಾರಣದಿಂದಲೋ, ಹಳ್ಳಿಯಿಂದ ಪಟ್ಟಣಕ್ಕೆ ಬರುತ್ತಾನೆ. ಉದ್ದಿಮೆಗಳಲ್ಲಿ ಕೂಲಿಯಾಳಾಗಿ ದುಡಿಯುತ್ತಾನೆ. ಇದರಿಂದ ತನ್ನ ಮನೆ, ಮನೆತನ, ಹೆಂಡತಿ, ಮಕ್ಕಳನ್ನು ಹಳ್ಳಿಯಲ್ಲಿಯೇ ಬಿಟ್ಟು ಶಹರದಲ್ಲಿ ವಾಸಿಸುವದರಿಂದ ಒಬ್ಬಂಟಿಗನಾಗಿ, ಮಾನಸಿಕ ಬಳಲಿಕೆಗೆ ಗುರಿಯಾಗುತ್ತಾನೆ. ಇದರಿಂದ ನಗರ ಪ್ರದೇಶದಲ್ಲಿ ಕುಡಿತ

ಜೂಜಾಟ, ವ್ಯಭಿಚಾರ ಮುಂತಾದವುಗಳಲ್ಲಿ ಶೀಘ್ರ ವಾಗಿಯೇ ಸಿಲುಕಿಕೊಂಡು ಮಾನವೀಯತೆಯನ್ನು ಕಳೆದು ಕೊಂಡು ತಂತಾನೇ ನಾಶಹೊಂದುತ್ತಾನೆ. ಇದರಿಂದ ಮುಂದೆ ಪಾರಾಗಿ ಹೋಗಲು ಪ್ರಯತ್ನಿಸಿದರೂ ಅವನು ಕೆಸರಿನಲ್ಲಿ ಹೂತುಹೋದ ಪ್ರಾಣಿಯಂತೆ ಪಾರಾಗಲಾರದೇ ಹೋಗುತ್ತಾನೆ.

ಈ ಎಲ್ಲ ಕಾರಣಗಳಿಂದಾಗಿ,

೧) ಶ್ರಮಜೀವಿಯು ಒಕ್ಕಲುತನದ ಮೇಲೆಯಾಗಲೀ, ಅಥವಾ ಉದ್ದಿಮೆಯ ಮೇಲಾಗಲೀ ನಿರಂತರವಾಗಿ ನಿಲ್ಲಲು ಸಾಧ್ಯವಾಗಲಾರದು.

೨) ಒಂದೆಡೆಗೆ ಸ್ಥಿರವಾಗಿ ನಿಲ್ಲುವ ಕಾರ್ಮಿಕನು ವಿರಳ.

೩) ಕಾರ್ಮಿಕರಲ್ಲಿಯ ಉತ್ಪಾದನೆಯ ಶಕ್ತಿಯು ಕಡಿಮೆ ಯಾಗುತ್ತದೆ.

೪) ಕಾರ್ಮಿಕರು ಒಂದು ಉದ್ದಿಮೆಯಿಂದ ಮತ್ತೊಂದು ಉದ್ದಿಮೆಗೆ, ಒಂದು ಕಾರಖಾನೆಯಿಂದ, ಮತ್ತೊಂದು ಕಾರಖಾನೆಗೆ ಅಲೆಯುವದು ಸಾಮಾನ್ಯವಾಗುವದು.

೫) ಇದರಿಂದ ಅವನ ಕುಶಲತೆ ನಶಿಸಿ ಕೆಲಸಕ್ಕೆ ಬಾರದೇ ಇರುವ ಪ್ರವೃತ್ತಿಯು ಬೆಳೆಯುತ್ತದೆ.

ಭಾರತದ ಶ್ರಮಿಕರಲ್ಲಿರುವ ಬಡತನವು ಪಾಶ್ಚಿಮಾತ್ಯ

ದೇಶಗಳೊಡನೆ ಹೋಲಿಸಿದಾಗ ಹೆಚ್ಚಿಗೆಯಿರುವದು ಕಂಡು ಬರುವದು. ಅನುಕೂಲಸ್ಥ ದೇಶಗಳಲ್ಲಿ ಬೇಡವೆನಿಸುವ ಅನೇಕ ಸೌಲಭ್ಯಗಳನ್ನು ಇಲ್ಲಿ ಒದಗಿಸುವದು ಆವಶ್ಯವಿರುವದು, ಮತ್ತು ಕಾರ್ಮಿಕ ಕಲ್ಯಾಣವನ್ನು ಕೈಕೊಳ್ಳುವದು ಅತೀ ಅವಶ್ಯವೆನಿಸುವದು.

ಈ ಕೆಳಗಿನ ದೃಷ್ಟಿಕೋನದಿಂದಲೂ ಕಾರ್ಮಿಕ ಕಲ್ಯಾಣದ ಅವಶ್ಯಕತೆಯನ್ನು ನಾವು ಮನಗಾಣಬಹುದು;

ವಸ್ತುವಿನ ಉತ್ಪಾದನೆಯು ನಾಲ್ಕು ಘಟಕಗಳಿಂದ ನಡೆಯುತ್ತದೆ. ಅಂತಹ ಘಟಕಗಳೆಂದರೆ, i) ಭೂಮಿ, i ) ಪರಿಶ್ರಮ, iii) ಭಂಡವಲು, iv) ಸಂಘಟನೆ.

i) ಭೂಮಿಯೆಂದರೆ ಸಾಮಾನ್ಯವಾಗಿ ಜನರು ವಾಸಿ, ಸುವ ಸ್ಥಳ, ಅಥವಾ ಪ್ರದೇಶವೆಂದು ತಿಳಿಯುವದುಂಟು. ಆದರೆ ಅರ್ಥಶಾಸ್ತ್ರದಲ್ಲಿ ಇದಕ್ಕೆ ವಿಶೇಷ ಅರ್ಥವಿರುವದು. ವಸ್ತುವಿನ ಉತ್ಪಾದನೆಗೆ ನೇರವಾಗಿಯಾಗಲೀ, ಪರೋಕ್ಷ ವಾಗಿಯಾಗಲೀ ನೆರವಾಗುವ ನಿಸರ್ಗದತ್ತವಾದ ಕಾಣಿಕೆ ಗಳಿಗೆ ಭೂಮಿಯೆಂದು ಕರೆಯುತ್ತಾರೆ. ಅಂತಹವುಗಳನ್ನು ಉದಾಹರಿಸುವದೆಂದರೆ, ಅರಣ್ಯ, ಹೊಳೆ, ಹಳ್ಳ, ಹಾಗೂ ಇತರ ಅರಣ್ಯ ಸಂಪತ್ತು ಮುಂತಾದವುಗಳು.

ii) ವಸ್ತುವಿನ ಉತ್ಪಾದನೆಯು ಉದ್ದಿಮೆಯಲ್ಲಿರುವ ಬಂಡವಲನ್ನು ಆವಲಂಬಿಸಿರುತ್ತದೆ. ಬಂಡವಲು ಹೆಚ್ಚಿಗೆ ಯಿದ್ದರೆ ವಸ್ತುವಿನ ಉತ್ಪಾದನೆಯನ್ನು ಹೆಚ್ಚಿಸಬಹುದು. ಮತ್ತು ಬಂಡವಲು ಕಡಿಮೆ ಇದ್ದರೆ ವಸ್ತುವಿನ ಉತ್ಪಾದನೆಯು ಕಡಿಮೆಯಾಗುತ್ತದೆ. ಯಂತ್ರೋಪಕರಣಗಳು, ಉಪಕರಣಗಳು ಆಸ್ತಿ ಹಣ ಮುಂತಾದವುಗಳನ್ನು ಬಂಢವಲದಲ್ಲಿ ಸೇರಿಸಬಹುದು.

iii) ಪರಿಶ್ರಮವು ಶ್ರಮಜೀವಿಯಿಂದ ನಡೆಯುತ್ತದೆ. ಶ್ರಮಜೀವಿಯು ಪರಿಶ್ರಮವನ್ನು ಹಣದ ರೂಪದಿಂದ ಅಳೆಯುತ್ತಾರೆ.

iv) ಭೂಮಿ, ಬಂಢವಲು, ಪರಿಶ್ರಮಗಳನ್ನು ಸರಿಯಾಗಿ ಹೊಂದಾಣಿಕೆ ಮಾಡಿ ವಸ್ತುವಿನ ಉತ್ಪಾದನೆಯನ್ನು ಕೈಕೊಳ್ಳುವವನು ಸಂಘಟಕನೆಂದು ಕರೆಯುತ್ತಾರೆ. ಈತನು ಕೈಗೊಳ್ಳುವ ಕಾರ್ಯವನ್ನು ಸಂಘಟನಾ ಕಾರ್ಯವೆಂದು ಕರೆಯುತ್ತಾರೆ.

ಸಂಘಟಕನಲ್ಲಿರುವ ಕಾರ್ಯದಕ್ಷತೆ, ಚತುರತೆ, ಚಾಣಾಕ್ಷತನ, ದೂರದರ್ಶಿತ್ವ ಮುಂತಾದ ಗುಣಗಳ ಮೇಲೆ ಉದ್ದಿಮೆಯ ಬೆಳವಣಿಗೆಯು ಅವಲಂಬಿತವಾಗಿರುತ್ತದೆ. ಯಾವ ವಸ್ತುವನ್ನು ತಯಾರಿಸಬೇಕು? ಎಷ್ಟು ಪ್ರಮಾಣದಲ್ಲಿ ತಯಾರಿಸಬೇಕು? ಮುಂತಾದ ನಿರ್ಣಯಗಳನ್ನು ಅವನು ತೆಗೆದು

ಕೊಳ್ಳುವನು. ಅಂತೆಯೇ ಇವನನ್ನು ಉದ್ದಿಮೆಯ ನಾಯಕ (Captain of Industry) ಎಂದು ಕರೆಯುತ್ತಾರೆ.

೧. ಮಾನವೀಯತೆ:-

ವಸ್ತುವಿನ ಉತ್ಪಾದನೆಯ ನಾಲ್ಕು ಘಟಕಗಳಲ್ಲಿ ಶ್ರಮಜೀವಿಯೂ ಒಬ್ಬನು. ಉಳಿದಿರುವ ಮೂರು ಘಟಕಗಳು ಚೈತನ್ಯರಹಿತವಾದವುಗಳು. ಆದುದರಿಂದ ಶ್ರಮಕ್ಕೆ ಬೇಕಾಗುವ ಜೀವಿಯನ್ನು ಮಾನವೀಯ ದೃಷ್ಟಿಕೋನದಿಂದ ನೋಡುವದು ಅವಶ್ಯವಾದುದು.

ಕೆಲಪ್ರಮಾಣದಲ್ಲಿ ಕಚ್ಚಾ ವಸ್ತುವನ್ನು ಉಪಯೋಗಿಸಿದರೆ, ಉದ್ದಿಮೆಯಲ್ಲಿ ವಸ್ತುವಿನ ಉತ್ಪಾದನೆಯು ಇಂತಿಷ್ಟೇ ಪ್ರಮಾಣದಲ್ಲಿ ಆಗುವದೆಂದು ಹೇಳಬಹುದು. ಆದರೆ ಹೆಚ್ಚು ಸಂಖ್ಯೆಗಳಲ್ಲಿ ಕಾರ್ಮಿಕರನ್ನು ನಿಯಮಿಸಿಕೊಂಡಾಗ ಇಂತಿಷ್ಟೇ ಕಾರ್ಯವಾಗುವದೆಂದು ಹೇಳಲು ಬರುವದಿಲ್ಲ. ಯಾಕೆಂದರೆ ಅದಕ್ಕೆ ಕಾರ್ಮಿಕನು ಕೆಲಸದಲ್ಲಿ ತೋರುವ ನಿಷ್ಠೆ, ಉತ್ಸಾಹ, ಏಕಾಗ್ರತೆ ಮುಂತಾದವುಗಳು ಕಾರಣವಾಗಿರುತ್ತವೆ. ಈ ಎಲ್ಲ ಘಟಕಗಳ ಮೇಲೆ ಕಾರ್ಮಿಕನ ಉತ್ಪಾದನೆಯು ಅವಲಂಬಿಸಿರುತ್ತದೆ. ಉತ್ಪಾದನೆಯೆಂದರೆ ಉತ್ಪಾದನಾ ಕೇಂದ್ರದಲ್ಲಿ ಇರುವಷ್ಟು ಜನರನ್ನು ಇಟ್ಟುಕೊಂಡು, ಇರುವಷ್ಟು ಬಂಢವಲು, ಮತ್ತು ಯಂತ್ರಗಳಿಂದ ದುಡಿಯುವ ಗಂಟೆಗಳನ್ನು ಹೆಚ್ಚಿಸದೆ ಕೇಂದ್ರದ ಉತ್ಪಾದನೆಯನ್ನು ಹೆಚ್ಚಿಸುವುದೇ ಆಗಿರುತ್ತದೆ.

ಅದಕ್ಕಾಗಿ ಶ್ರಮಜೀವಿಗಳಿಗೆ ಕೆಲವೊಂದು ಅನುಕೂಲತೆ ಮತ್ತು ಸೌಕರ್ಯಗಳನ್ನು ಒದಗಿಸಬೇಕಾಗುತ್ತದೆ. ಇಂತಹ ಅನುಕೂಲತೆಯನ್ನು ಕಾರ್ಮಿಕರು ತಾವೇ ಪಡೆಯುವದು ಸಾಧ್ಯವಿರುವದಿಲ್ಲ. ಅದಕ್ಕಾಗಿ ಅವುಗಳನ್ನು ಮಾನವೀಯ ಅಂಶಗಳೆಂದು ಕರೆಯಬಹುದು.

೨) ನಾಗರಿಕತೆ:-

ಕಾರ್ಮಿಕನು ಸಮಾಜದಲ್ಲಿ ತನ್ನ ಜವಾಬ್ದಾರಿಯನ್ನು ತಿಳಿಯುವದು ಅವಶ್ಯವಾದದ್ದು. ಶ್ರಮಗೌರವವನ್ನು ಕಾರ್ಮಿಕರು ತಿಳಿಯಲು ಮತ್ತು ಅವನು ಉತ್ತಮ ನಾಗರಿಕನಾಗಿ ಬಾಳಲು ಸಾಧ್ಯವಾಗುವದು. ಉತ್ಪಾದನೆಯ ದೃಷ್ಟಿಯಿಂದ ನಾಗರಿಕ ಜಗತ್ತು ಇದನ್ನು ಸ್ವಾಗತಿಸುತ್ತದೆ.

೩) ಆರ್ಥಿಕ:-

ಶ್ರಮಿಕರ ಕಾರ್ಯ ಸಾಮರ್ಥ್ಯವು ಹೆಚ್ಚುತ್ತದೆ. ಅದರಿಂದ ರಾಷ್ಟ್ರದ ಆರ್ಥಿಕ ಬೆಳವಣಿಗೆಯಾಗಿ ಸಂಪನ್ಮೂಲಗಳು ಬೆಳೆಯುತ್ತವೆ. ಆರೋಗ್ಯ, ಮಕ್ಕಳ ಕಲ್ಯಾಣ ಹಾಗೂ ಇನ್ನಿತರ ಕ್ಷೇಮಾಭ್ಯುದಯ ಕಾರ್ಯಗಳಿಂದ ಕಾರ್ಮಿಕನ ಆರೋಗ್ಯವು ಸುಧಾರಿಸುವದು.

ಳ) ಔದ್ಯೋಗಿಕ ಶಾಂತಿ:-

ಬಂಢವಲದಾರ ಮತ್ತು ಶ್ರಮಜೀವಿಯು ನಡುವೆ ಯಾವದೇ ಕಾರಣದಿಂದ ವಿಷಮತೆಯು ತಲೆದೋರಿದಾಗ ಬೀಗ ಮುದ್ರೆ ಅಥವಾ ಸಂಪುಗಳು ನಡೆಯುತ್ತವೆ. ಇದರಿಂದ ಬಂಢವಲದಾರನು ಲಾಭಾಂಶವನ್ನು ಕಳೆದುಕೊಳ್ಳುತ್ತಾನೆ. ಆದರೆ ಕಲ್ಯಾಣಕಾರ್ಯಗಳಿಂದ ಅಂತಹ ವಿಷಮತೆಯುನ್ನು ಹೋಗಲಾಡಿಸಲು ಸಾಧ್ಯವಾಗುವದು. ಔದ್ಯಮಿಕ ತಂಟೆಗಳನ್ನು ಶಾಂತಿಯುತ ಸಂಧಾನಗಳ ಮೂಲಕ ಬಗೆಹರಿಸಲು ಸಾಧ್ಯವಾಗುತ್ತದೆ. ಇದು ಕಾರ್ಮಿಕನಲ್ಲಿ ಮಾಲಿಕನ ಬಗೆಗೆ ಸದಭಿಪ್ರಾಯ ಮೂಡಿಸುತ್ತದೆ ಮಾಲಿಕನು ತನ್ನ ಸಂಕಷ್ಟದಲ್ಲಿ ಭಾಗವಹಿಸುತ್ತಾನೆ ಎಂಬುದು ಮನವರಿಕೆಯಾಗಿ ತನ್ನಲ್ಲಿರುವ ದೋಷಗಳನ್ನು ಕಾರ್ಮಿಕ ಮರೆಯುತ್ತಾನೆ.

೫) ಉತ್ಪಾದನೆ:-

ದೇಶದಲ್ಲಿ ಉತ್ಪಾದನೆಯು ಹೆಚ್ಚುವದು. ಇದರಿಂದ ಮಾರುಕಟ್ಟೆಯಲ್ಲಿ ವಸ್ತುವಿನ ಸರಬರಾಜು ಹೆಚ್ಚಿಗೆಯಾಗುವದು. ಬೇಡಿಕೆಯು ಮೊದಲಿನಷ್ಟೆ ಇದ್ದರೆ ಮಾರಾಟದ ಬೆಲೆಯು ಕಡಿಮೆಯಾಗುವದು. ಇದರಿಂದ ಗಿರಾಕಿಯು ತೃಪ್ತನಾಗುವನು.

ಭಾರತವು ಒಂದು ಅವಸ್ಥೆಯಿಂದ ಮತ್ತೊಂದು ಅವಸ್ಥೆಗೆ ಪರಿವರ್ತನೆಯನ್ನು ಹೊಂದುತ್ತಿರುವದು. ಗ್ರಾಮೀಣ ಮತ್ತು ಕೃಷಿ ಆಧಾರಿತ ಸಮಾಜ ಈಗ ನಗರೀಕೃತ ಕೈಗಾರಿಕೆಯ ಆಧಾರಿತ ಸಮಾಜವಾಗಿ ಪರಿವರ್ತನೆಯನ್ನು ಹೊಂದುತ್ತಿರುವದು. ಗ್ರಾಮಾಂತರ ಪ್ರದೇಶದಿಂದ ಕಾರ್ಮಿಕರು, ಸುಲಭವಾಗಿ ಕೈಗಾರಿಕಾ ಜೀವನದ ಪರಿಸರಕ್ಕೆ ಹೊಂದಿಕೊಳ್ಳುವಂತೆ ಅನುಕೂಲತೆಯನ್ನು ಒದಗಿಸುವದು ಅವಶ್ಯ.

---

# ೩. ಶ್ರಮಜೀವಿಗಳ ಕಲ್ಯಾಣ ಕಾರ್ಯದ ವಿಂಗಡನೆ

ಶ್ರಮಜೀವಿಗಳ ಅಥವಾ ಕಾರ್ಮಿಕರ ಕಲ್ಯಾಣವನ್ನು ಆಂತರಿಕ ಮತ್ತು ಬಾಹ್ಯ ಎಂದು ವಿಂಗಡಿಸಬಹುದು.

ಆಂತರಿಕ ಸೌಲಭ್ಯಗಳೆಂದರೆ, ಕಾರಖಾನೆಯಲ್ಲಿ ಉಪಹಾರ ಮಂದಿರ, ಶಿಶುವಿಹಾರ, ಕುಡಿಯಲು ಸ್ವಚ್ಛವಾದ ನೀರು, ಆರೋಗ್ಯ, ಸಂರಕ್ಷಣೆ, ಸಮವಸ್ತ್ರ ಮುಂತಾದವುಗಳ ಅನುಕೂಲತೆಗಳನ್ನು ಉದಾಹರಿಸಬಹುದು.

ಬಾಹ್ಯ ಸೌಲಭ್ಯಗಳೆಂದರೆ, ಗ್ರಾಚ್ಯುಯಿಟೆ, ಭವಿಷ್ಯ ನಿಧಿ, ನಿವೃತ್ತಿ ವೇತನ, ಚಿಕಿತ್ಸೆ, ಸಹಾಯ ಧನ, ಶೈಕ್ಷಣಿಕ ಸೌಕರ್ಯಗಳು, ಪುಸ್ತಕಭಂಡಾರ ಮುಂತಾದವುಗಳನ್ನು ಉದಾಹರಿಸಬಹುದು.

ಈ ಎಲ್ಲ ಸೌಲಭ್ಯಗಳು ಅಥವಾ ಕೆಲ ಸೌಲಭ್ಯಗಳು ಕಾರ್ಮಿಕ ಸಂಘ, ಸಾರ್ವಜನಿಕ ಸಂಘ ಸಂಸ್ಥೆ, ಉದ್ಯೋಗಪತಿ ಮುಂತಾದವರಿಂದ ನಡೆಯುಬಹುದು. ಕಲ್ಯಾಣ ಕಾರ್ಯವು ಇಂತಹವನಿಂದಲೇ ನಡೆಯುಬೇಕೆಂಬ ನಿರ್ಬಂಧವೇನೂ ಇಲ್ಲ. ಆದುದರಿಂದ ಶ್ರಮಜೀವಿಗಳಿಗೆ ಒದಗಿಸಬಹುದಾದ ಕಲ್ಯಾಣಕಾರ್ಯಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು:

೧) ಐಚ್ಛಿಕವಾಗಿ ಇರುವ ಸೌಲಭ್ಯ, ಎರಡನೆಯದು ಕಾನೂನಿನ ಮೇರೆಗೆ ಇರುವ ಸೌಲಭ್ಯ.

೧) ಐಚ್ಛಿಕವಾಗಿ: ಯಾವುದೇ ಕಾಯದೆ ಕಾನೂನುಗಳಿಗೆ ಅನುಸಾರವಾಗಿ ಅಥವಾ ಯಾರ ಒತ್ತಾಯಕ್ಕಾಗಲೀ ಈ ಕಲ್ಯಾಣ ಕಾರ್ಯವು ನಡೆಯುವದಿಲ್ಲ. ಆದರೆ ಸ್ವಯಂ ಇಚ್ಛೆಯಿಂದ ಕಲ್ಯಾಣ ಕಾರ್ಯವು ನಡೆಯುವದುಂಟು. ಇಂತಹ ಕಾರ್ಯಗಳು ವ್ಯಕ್ತಿ ಅಥವಾ ಸಂಸ್ಥೆಯಿಂದ ನಡೆಯುತ್ತವೆ. ಅವುಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು:

ಅ) ಉದ್ಯೋಗಪತಿಯಿಂದ

ಆ) ಕಾರ್ಮಿಕ ಸಂಘಗಳಿಂದ

ಇ) ಸಂಯುಕ್ತವಾಗಿ

ಈ) ಸಾರ್ವಜನಿಕ ಸೇವಾ ಸಂಸ್ಥೆಯಿಂದ

೨) **ಕಾನೂನಿಗನುಸಾರವಾಗಿ :** ಐಚ್ಛಿಕವಾಗಿ ನಡೆವ

ಕಲ್ಯಾಣ ಕಾರ್ಯವು ಸರಿಯಾಗಿ ನಡೆಯದೇ ಇದ್ದಾಗ ಸರಕಾರವು ಮಧ್ಯೆ ಪ್ರವೇಶಿಸಿ ಕೆಲ ಕಾನೂನುಗಳನ್ನು ಪಾಸು ಮಾಡುವದು. ಕೇಂದ್ರ ಹಾಗೂ ರಾಜ್ಯಸರಕಾರಗಳು ಇಂತಹ ಕಾನೂನುಗಳನ್ನು ಜಾರಿಗೆ ತರುತ್ತವೆ.

## ೪. ಐಚ್ಛಿಕ ಕಲ್ಯಾಣ ಕಾರ್ಯಗಳು

೧೯೧೪ ರಿಂದ ೧೯೧೮ರ ವರೆಗಿನ ಜಗತ್ತಿನ ಮಹಾಯುದ್ಧವಾಗುವದಕ್ಕಿಂತ ಮೊದಲು ಶ್ರಮಜೀವಿಗಳ ಕಲ್ಯಾಣ ಕಾರ್ಯವು ನಡೆಯಲಿಲ್ಲವೆಂದೇ ಹೇಳಬಹುದು. ಅದಕ್ಕೆ ಅನೇಕ ಕಾರಣಗಳನ್ನು ನಾವು ಕೊಡಬಹುದು. ಅಂತಹ ಕಾರಣಗಳಲ್ಲಿ ಕೆಲವೊಂದನ್ನು ಇಲ್ಲಿ ಹೇಳುವದಾದರೆ:

೧) ಕಾರ್ಮಿಕರಲ್ಲಿ ಒಗ್ಗಟ್ಟು ಇಲ್ಲದೇ ಇದ್ದುದು.

೨) ಅನಕ್ಷರತೆಯಿಂದ ದೇಶದ ಆಗುಹೋಗುಗಳ ತಿಳುವಳಿಕೆಯು ಕಾರ್ಮಿಕರಿಗೆ ಆಗದೇ ಇದ್ದುದು.

೩) ಅಜ್ಞಾನ ಮತ್ತು ಮೂಢನಂಬಿಕೆಗಳು ಅವರಲ್ಲಿ ನೆಲೆಯಾಗಿದ್ದುದು.

ಳ) ದೂರದೃಷ್ಟಿ ಇಲ್ಲದೇ ಇದ್ದುದು.
ಱ) ಸರಕಾರದ ಔದಾಸೀನ್ಯ ಇತ್ಯಾದಿ.

೧೯೩೦ರಲ್ಲಿ ಜಗತ್ತಿನ ಮಾರುಕಟ್ಟೆಯಲ್ಲಿ ಆರ್ಥಿಕ ಕುಗ್ಗುವಿಕೆಯಿಂದ ವಸ್ತುವಿನ ಉತ್ಪಾದನೆಯು ಕುಂಠಿತ ವಾಯಿತು. ಆಗ ಕಾರ್ಮಿಕರ ಕಲ್ಯಾಣದ ಆವಶ್ಯಕತೆಯು ಜಗತ್ತಿಗೆ ಕಂಡು ಬಂದಿತು. ದ್ವಿತಿಯ ಮಹಾಯುದ್ಧದ ನಂತರ ಅದರ ಆವಶ್ಯಕತೆಯು ಮತ್ತಷ್ಟು ಹೆಚ್ಚಿತು. ಅಂತೆಯೇ ಅವರಿಗೆ ಬೇಕಾಗುವ ಅನುಕೂಲತೆಯನ್ನು ಒದಗಿಸಲಾಯಿತು. ಮತ್ತು ಅವರ ಆರೋಗ್ಯದ ಕಡೆಗೆ ಲಕ್ಷ್ಯ ಕೊಡಲಾಯಿತು.

ಐಚ್ಛಿಕವಾಗಿ ಉದ್ಯೋಗಪತಿ ಒದಗಿಸುವ ಕಲ್ಯಾಣ ಕಾರ್ಯಗಳನ್ನು ನೋಡೋಣ.

## ಅ) ಉದ್ಯೋಗಪತಿಯಿಂದ

ಕಾಯ್ದೆಗೆ ಒಳಪಡದ ಸೌಲಭ್ಯಗಳನ್ನು ಸಹ ಉದ್ಯೋಗ ದಾತರೂ ಒದಗಿಸುವದುಂಟು. ಇವುಗಳಲ್ಲಿ ಮುಖ್ಯವಾದವು ಗಳೆಂದರೆ ಚಿಕಿತ್ಸೆ, ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣದ ಅನುಕೂಲತೆ, ಮನರಂಜನೆ ಮುಂತಾದವು. ಕೆಲವರು ತಮ್ಮ ವರೇ ಆದ ವೈದ್ಯರನ್ನು ನಿಯಮಿಸುವದುಂಟು. ಪ್ರತ್ಯೇಕ ವಾದ ಆಸ್ಪತ್ರೆಯನ್ನು ತೆರೆಯುವದುಂಟು. ವರುಷದ ಕೊನೆಗೆ

ಸಾಮಾನ್ಯವಾಗಿ ದೀಪಾವಳಿಯ ಸಮಯದಲ್ಲಿ ಪ್ರೋತ್ಸಾಹ ಕರವಾದ ಕಾಣಿಕೆಗಳನ್ನು ಕೊಡುವದುಂಟು.

ಕಾರ್ಮಿಕರ ಮಕ್ಕಳಿಗಾಗಿ ತೆರೆಯಲ್ಪಟ್ಟ ಶಿಕ್ಷಣ ಸಂಸ್ಥೆಗಳಿಗೆ ಉದಾರವಾದ ಸಹಾಯವನ್ನು ಒದಗಿಸು ವದುಂಟು. ಕಾರ್ಮಿಕರ ವಾಸಸ್ಥಾನದಿಂದ ಕಾರಖಾನೆಗೆ ಹೋಗಿಬರಲು ವಾಹನ ಸೌಕರ್ಯದ ಅನುಕೂಲತೆಯನ್ನು ಮಾಡಿರುವದುಂಟು. ಆಹಾರದ ಅಭಾವದ ಕಾಲದಲ್ಲಿ ಅಥವಾ ಬೆಲೆಏರಿಕೆಯ ದಿನದಲ್ಲಿ ಆವಶ್ಯಕ ಪದಾರ್ಥ ಗಳನ್ನು ನ್ಯಾಯಬೆಲೆ ಅಂಗಡಿಗಳ ಮುಖಾಂತರ ಒದಗಿಸುವದುಂಟು. ಒಮ್ಮೊಮ್ಮೆ ಅದಕ್ಕೆ ಬೇಕಾ ಗುವ ಬಂಢವಲು, ಕಟ್ಟಡ ಇತ್ಯಾದಿಗಳನ್ನು ಒದಗಿಸುವ ದುಂಟು.

ಹತ್ತಿಯ ಉದ್ದಿಮೆ, ಪಾದರಕ್ಷೆಗಳ ಉದ್ದಿಮೆ, ಇಂಜನಿ ಯರಿಂಗ ಉದ್ದಿಮೆ, ಪೇಪರು, ಸಿಮೆಂಟು, ತೋಟಗಾರಿಕೆ ಮುಂತಾದವುಗಳಲ್ಲಿ ಹೆಚ್ಚಿನ ಕಲ್ಯಾಣಕಾರ್ಯಗಳನ್ನು ಉದ್ಯೋಗ ಪತಿಯು ಮಾಡಿದ್ದಾನೆ.

ಕರ್ನಾಟಕ ರಾಜ್ಯದಲ್ಲಿ ಐಚ್ಛಿಕವಾಗಿ ಉದ್ಯೋಗಪತಿ ಯಿಂದ ನಡೆದ ಕೆಲವು ಕಲ್ಯಾಣಕಾರ್ಯಗಳನ್ನು ಉದಾಹ ರಿಸುವದಾದರೆ,

ಬೆಂಗಳೂರಿನಲ್ಲಿ ಸ್ಥಾಪಿತವಾಗಿರುವ ಜವಳಿಯ ಉದ್ದಿಮೆ ಗಳಲ್ಲಿ ದುಡಿಯುತ್ತಿರುವ ಕಾರ್ಮಿಕರಿಗಾಗಿ ಹಾಗೂ ಅವರ ಕುಟುಂಬದವರಿಗಾಗಿ ದವಾಖಾನೆ, ಹೆರಿಗೆ ಮತ್ತು ಶಿಶು ಆರೋಗ್ಯ ಕೇಂದ್ರಗಳನ್ನು ಪ್ರಾರಂಭಿಸಲಾಗಿದೆ. ಇವುಗಳಲ್ಲಿ ಆಗಾಗ್ಗೆ ಆರೋಗ್ಯ ತಪಾಸಣೆ ನಡೆಯುತ್ತದೆ.

ಕಾರ್ಮಿಕರು ಅಕ್ಷರಸ್ಥರಾಗಲು ರಾತ್ರಿಶಾಲೆಯನ್ನು ಪ್ರಾರಂಭಿಸಲಾಗಿದೆ. ಅವರ ಸಾಂಸ್ಕೃತಿಕ ಚಟುವಟಿಕೆ ಗಾಗಿ ಮನರಂಜನಾ ಕೇಂದ್ರ, ಕ್ರೀಡಾ ಕೇಂದ್ರಗಳನ್ನು ತೆರೆಯಲಾಗಿದೆ.

ತೋಟಗಾರಿಕೆಯಲ್ಲಿ ತೋಟದಿಂದ ಒಡಗೂಡಿದ ದವಾ ಖಾನೆ, ೪ ಶುಶ್ರೂಷಾ ಕೇಂದ್ರಗಳು. ಜೊತೆಗೆ ವೈದ್ಯರು, ೧೫ ಕಂಪೌಂಡರರು, ೬ ಪ್ರಾಥಮಿಕ ಶಾಲೆ ಹಾಗೂ ೩ ಕಲ್ಯಾಣಕೇಂದ್ರಗಳನ್ನು ತೆರೆಯಲಾಗಿದೆ.

ಹಟ್ಟಿಯ ಬಂಗಾರದ ಗಣಿ ಕಂಪನಿಯಲ್ಲಿ ಸುಸಜ್ಜಿತ ವಾದ ಆಸ್ಪತ್ರೆ, ಕ್ಯಾಂಟೀನು, ಆಹಾರಧಾನ್ಯದ ಅಂಗಡಿ, ಸಹಕಾರೀ ಸಂಘಗಳು ಇರುವವಲ್ಲದೇ ಕಾಯಿಪಲ್ಲೆಯನ್ನು ಕಾರ್ಮಿಕರಿಗೆ ಒದಗಿಸುವದುಂಟು. ಅವರ ಮನರಂಜನೆ ಗೋಸುಗ ಆಂತರಿಕ ಆಟಗಳು, ಪುಕ್ಕಟೆಯಾಗಿ ಸಿನೇಮಾ ವನ್ನು ತೋರಿಸಲಾಗುವದು.

**ಉದ್ಯೋಗಪತಿಯಿಂದ ನಡೆದ ಕಾರ್ಯದ ವಿಮರ್ಶೆ :-**

ಉದ್ಯೋಗಪತಿಯು ನಿಜವಾದ ಸೇವಾಭಾವನೆಯಿಂದ ಕಲ್ಯಾಣಕಾರ್ಯವನ್ನು ಕೈಕೊಂಡಿರುವದು ಅತ್ಯಲ್ಪವೆಂದು ನಡೆಸಲಾದ ಸಮೀಕ್ಷೆಗಳಿಂದ ಕಂಡುಬರುತ್ತದೆ.

ಕೆಲ ಉದ್ಯೋಗಪತಿಗಳು ಈ ಕಾರ್ಯವನ್ನು ಐಚ್ಛಿಕವಾಗಿ ನೆರವೇರಿಸುವದಂತೂ ದೂರ ಉಳಿಯಿತು, ಅವರು ಕಾನೂನಿನ ಚೌಕಟ್ಟಿನಿಂದ ಪಾರಾಗುವ ಅನೇಕ ಉದಾಹರಣೆಗಳು ಉಂಟು. ಇದೊಂದು ಹೊರೆಯಾದ ಹೊಣೆಗಾರಿಕೆಯೆಂದೂ, ಅನವಶ್ಯಕ ಖರ್ಚು ಎಂದೂ, ಭ್ರಮೆ ಅಥವಾ ಪಾಶವೆಂದೂ ಬಗೆದಿರುವದುಂಟು.

ರಾಷ್ಟ್ರೀಯ ಕಾರ್ಮಿಕ ಆಯೋಗವು ನಡೆಸಿರುವ ಅಧ್ಯಯನದಿಂದ ಉದ್ಯೋಗಪತಿಯು ನಡೆಸಿದ ಕಾರ್ಯಗಳು ಅಸಮರ್ಪಕವಾಗಿವೆಯೆಂದು ತಿಳಿದುಬಂದಿತು.

ಕಾರ್ಮಿಕರು ಉದ್ದಿಮೆದಾರರಿಂದ ನಡೆಯುವ ಕಲ್ಯಾಣ ಕಾರ್ಯವನ್ನು ಬೇರೆ ದೃಷ್ಟಿಯಿಂದ ನೋಡುವದುಂಟು. ಕಾರ್ಮಿಕ ಸಂಘಗಳ ಶಕ್ತಿಯನ್ನು ಮುರಿಯಲು ಉಪಯೋಗಿಸುವ ಅಸ್ತ್ರವಿದೆಂಬ ಕಲ್ಪನೆಯು ಸಹ ಇದೆ.

ಆದರೆ ಶ್ರಮಜೀವಿಗಳ ಕಲ್ಯಾಣಕ್ಕೆ ಮಾಡಿ

ರುವ ಖರ್ಚು ವ್ಯರ್ಥವಾಗಲಾರದು. ಯಾಕೆಂದರೆ: ೧) ಕಾರ್ಮಿಕರ ನಿಷ್ಠೆಯನ್ನು ಗಳಿಸಲು ಸಾಧ್ಯವಾಗುವದು. ಇದರಿಂದ ಕಾರ್ಮಿಕನು ಮಾಲಿಕರಲ್ಲಿ ವಿಶ್ವಾಸವನ್ನು ವ್ಯಕ್ತಪಡಿಸಲು ಸಾಧ್ಯವಾಗುತ್ತದೆ. ಅವನ ಕಷ್ಟ ಸುಖಗಳಲ್ಲಿ ಮಾಲಿಕನು ಸಹಭಾಗಿಯಾಗುವನೆಂಬ ತಿಳುವಳಿಕೆಯು ಅವರಲ್ಲಿ ಬರುವದು. ಮತ್ತು ಉದ್ದಿಮೆಯಲ್ಲಿಯ ಕಾರ್ಯವನ್ನು ಯೋಗ್ಯತೆಯಿಂದ ಮತ್ತು ದಕ್ಷತೆಯಿಂದ ನಡೆಸಿಕೊಂಡು ಹೋಗಬೇಕೆಂಬ ಭಾವನೆ ಅವರಲ್ಲಿ ಮೂಡುತ್ತದೆ. ೨) ಉತ್ತಮವಾದ ಆಹಾರ, ಅನುಕೂಲವಾದ ಮನೆಯ ವ್ಯವಸ್ಥೆ, ಸಾರಿಗೆಯ ಅನುಕೂಲ ಮುಂತಾದವುಗಳನ್ನು ಕಾರ್ಮಿಕನಿಗೆ ಮಾಲಿಕನು ಒದಗಿಸುವದರಿಂದ ಕಾರ್ಮಿಕನ ಕರ್ತವ್ಯದಕ್ಷತೆ ಹೆಚ್ಚುತ್ತದೆ.

ಕಾರ್ಮಿಕರಿಗೆ ಕಲ್ಯಾಣಕಾರ್ಯವನ್ನು ಕೈಗೊಳ್ಳುವಂತೆ ಉದ್ಯೋಗಪತಿಯನ್ನು ಪ್ರೋತ್ಸಾಹಿಸುವದು ಸರಕಾರದ ಆದ್ಯ ಕರ್ತವ್ಯ. ಆದರೆ ಇದಕ್ಕೆ ಇರುವ ಮುಖ್ಯವಾದ ಕೊರತೆಯೆಂದರೆ ಮೊದಲನೆಯದಾಗಿ ಹಣ, ಎರಡನೆಯದಾಗಿ ಸೌಲಭ್ಯದ ಅವಶ್ಯಕತೆಯ ಬಗೆಗೆ ಅನಾಸ್ಥೆ.

**ಆ) ಕಾರ್ಮಿಕ ಸಂಘಗಳಿಂದ**

ಕಾರ್ಮಿಕರು ತಾವೇ ಕೂಡಿಕೊಂಡು ತಮಗೆ ಅನುಕೂಲವೆನಿಸಿದಂತೆ ತಮ್ಮ ಪರಿಸ್ಥಿತಿಯನ್ನು ಸುಧಾರಿಸ

ಬಹುದು. ಅದಕ್ಕಾಗಿ ಕಾರ್ಮಿಕ ಸಂಘಗಳು ಕೆಲವೊಂದು ಕಲ್ಯಾಣಕಾರ್ಯಗಳನ್ನು ನಡೆಸುತ್ತಿವೆ.

ಅಹಮದಾಬಾದದಲ್ಲಿಯ ನೇಯ್ಗೆಯ ಕೂಲಿಕಾರ ಸಂಘ, ಇಂದೂರದಲ್ಲಿಯ ನೇಯ್ಗೆಯ ಸಂಘ, ಕಾನಪೂರದಲ್ಲಿಯ ಒಂದು ಸಂಘ, ಅಂತಹ ಅನೇಕ ಕಾರ್ಯಗಳನ್ನು ಕೈಕೊಂಡಿರುತ್ತವೆ.

ಅಹಮದಾಬಾದದಲ್ಲಿರುವ ಕಾರ್ಮಿಕ ಸಂಘವು ಪ್ರತಿ ವರ್ಷವೂ ಸುಮಾರು ೪೦,೦೦೦ ರೂ.ಗಳನ್ನು ಈ ಕಾರ್ಯಕ್ಕಾಗಿ ವಿನಿಯೋಗಿಸುತ್ತಿರುವದು. ಅದರ ಒಟ್ಟು ಉತ್ಪನ್ನದ ಶೇ. ೬೦ ರಿಂದ ಶೇ ೬೫ ರಷ್ಟು ಪ್ರಮಾಣದ ಉತ್ಪನ್ನವನ್ನು ಈ ಕಾರ್ಯಕ್ಕೆ ವಿನಿಯೋಗಿಸಲಾಗುತ್ತಿರುವದು. ಹಗಲು ನಡೆಯುವ ಮೂರು, ಮತ್ತು ರಾತ್ರಿ ನಡೆಯುವ ಮೂರು ಶಾಲೆಗಳನ್ನು ನಡೆಸುತ್ತಿರುವದು. ಕಾರ್ಮಿಕರ ಮಕ್ಕಳಿಗೆ ಎರಡು ಅಭ್ಯಾಸದ ಮನೆಗಳನ್ನು, ೬೯ ಗ್ರಂಥಾಲಯ ಮತ್ತು ಓದುವ ಮನೆಗಳ ಅನುಕೂಲತೆಯನ್ನು ಒದಗಿಸಿದೆ. ೨೭ ಸಾಂಸ್ಕೃತಿಕ ಮತ್ತು ಸಾಮಾಜಿಕ ಕೇಂದ್ರಗಳು, ತಾಲೀಮುಖಾನೆಗಳು, ಹೊಲಿಗೆಯಲ್ಲಿ ತರಬೇತಿ, ಶಿಷ್ಯವೃತ್ತಿ ಮುಂತಾದ ಅನೇಕ ಕಾರ್ಮಿಕ ಕಲ್ಯಾಣ ಕಾರ್ಯಗಳನ್ನು ಕೈಗೊಂಡಿರುವದು.

ಈ ಕಲ್ಯಾಣಕಾರ್ಯಕ್ಕಾಗಿ ೨೫ ತನಿಖಾಧಿಕಾರಿಗಳು, ಹೆಂಗಸರು ಕೆಲಸಗಾರರನ್ನು ನಿಯಮಿಸಲಾಗಿರುವದು. ಇವರು

ಕಾರ್ಮಿಕರನ್ನು ಮುಖತಃ ಭೆಟ್ಟಿಯಾಗಿ ಅವರ ಅವಶ್ಯಕತೆ ಮತ್ತು ಅನುಕೂಲತೆಗೆ ಬೇಕಾಗುವ ಸಹಾಯವನ್ನು ಒದಗಿಸುತ್ತಾರೆ. ಕೆಲಸದ ಮೇಲೆ ಇರುವ ಸಿಬ್ಬಂದಿಯವರಿಗೆ ಮತ್ತು ಹೆಣ್ಣುಮಕ್ಕಳಿಗೆ ಕೇಂದ್ರಿಯ ಊಟದ ವ್ಯವಸ್ಥೆಯು ಇರುವದು ಒಂದು ವಿಶೇಷವೆಂದು ಹೇಳಬಹುದು.

೩೯ ಮಕ್ಕಳ ಕೇಂದ್ರಗಳನ್ನು ತೆರೆಯಲಾಗಿರುವದು. ಶುಶ್ರೂಷಾಲಯ ಮತ್ತು ಹೆರಿಗೆಯ ಕೇಂದ್ರಗಳನ್ನು ನಡೆಸಲಾಗುತ್ತಿರುವದು. ಕಾರ್ಮಿಕರ ಸಹಕಾರೀ ಬ್ಯಾಂಕು ಸ್ಥಾಪಿಸಿರುವದುಂಟು. ೩೭ ಗೃಹನಿರ್ಮಾಣ ಸಂಘ, ೩೧ ಸಾಲದ ಸಂಘಗಳನ್ನು ಸ್ಥಾಪಿಸಲಾಗಿರುವದಲ್ಲದೇ 'ಮಜದೂರ ಸಂದೇಶ' ವೆಂಬ ಪತ್ರಿಕೆಯನ್ನು ಪ್ರಾರಂಭಿಸಲಾಗಿರುವದು.

ಕಾರ್ಮಿಕ ಸಂಘಗಳಿಗೆ ಬೇಕಾಗುವ ಆರ್ಥಿಕ ಅನುಕೂಲತೆಯ ಅವಕಾಶಗಳು ಕಡಮೆ. ಯಾಕಂದರೆ ಉದ್ಯೋಗಪತಿಯು ಕಾರ್ಮಿಕ ಸಂಘಗಳಿಗೆ ಆರ್ಥಿಕ ಸಹಾಯವನ್ನು ಒದಗಿಸುವದು ಕಡಿಮೆ. ಮತ್ತು ಶ್ರಮಜೀವಿಗಳು ತಮ್ಮ ಕೂಲಿಯ ಕೆಲಭಾಗವನ್ನು ವಂತಿಗೆಯಾಗಿ ಸಲ್ಲಿಸಬೇಕೆಂದರೆ ಅವರ ಕೂಲಿಯ ಹಣವು ಅವರ ಉದರ ನಿರ್ವಹಣೆಗೇ ಸಾಲುವದಿಲ್ಲ. ಅಂತೆಯೇ "ಕಾರ್ಮಿಕ ಸಂಶೋಧನಾ ಸಂಸ್ಥೆ"ಯು ಈ ವಿಷಯವನ್ನು ವಿವರಿಸುತ್ತಾ ಕಾರ್ಮಿಕ

ಸಂಘಗಳು ಈ ಕಲ್ಯಾಣಕಾರ್ಯವನ್ನು ಕೈಕೊಳ್ಳುವದು ಸಾಧ್ಯ ವಿಲ್ಲದ ಮಾತು ಎಂದಿದೆ. ಈ ಎಲ್ಲ ದೃಷ್ಟಿಗಳಿಂದ ಕಾರ್ಮಿಕ ಸಂಘಗಳು ಕೈಗೊಂಡಿರುವ ಕಾರ್ಯವು ಅಲ್ಪವೆಂದು ಹೇಳ ಬಹುದು.

### ಇ) ಸಂಯುಕ್ತವಾಗಿ

ಸರಕಾರ, ಕಾರ್ಮಿಕ ಮತ್ತು ಒಡೆಯರು ಕೂಡಿ ಕೊಂಡು "ಕಲ್ಯಾಣನಿಧಿ ಸಂಸ್ಥೆ"ಯ ಸಹಾಯವನ್ನು ಪಡೆದು ವಸತಿ ನಿರ್ಮಾಣ, ವೈದ್ಯಕೀಯ ಸೌಕರ್ಯ, ನೀರಿನ ಪೂರೈಕೆ, ಶಿಕ್ಷಣ ಹಾಗೂ ವಿವಿಧೋದ್ದೇಶಗಳ ಕಟ್ಟಡ ಮೊದಲಾದ ಸೌಕರ್ಯವನ್ನು ಒದಗಿಸಲು ಆಸಕ್ತಿ ವಹಿಸುವದು ಅವಶ್ಯ. ಅದಕ್ಕಾಗಿ ನಿಧಿಯನ್ನು ಬಳಸಲಾಗು ವದು. ಕೇಂದ್ರ ಸರಕಾರವು "ಕಾರ್ಮಿಕ ಕಲ್ಯಾಣನಿಧಿ" ಯನ್ನು ಉದ್ದಿಮೆಯಲ್ಲಿ ಬಳಕೆಗೆ ತಂದಿದೆ. ಖಾಸಗಿ ಉದ್ದಿಮೆ ಯಲ್ಲಿಯೂ "ಕಲ್ಯಾಣ ನಿಕ್ಷೇಪ ನಿಧಿ"ಯನ್ನು ಬಳಕೆಯಲ್ಲಿ ತರಲು ಉದ್ದೇಶಿಸಲಾಗಿದೆ.

ಪ್ರತಿಯೊಬ್ಬ ಕಾರ್ಮಿಕನು ಎಷ್ಟು ಹಣವನ್ನು ಕೊಡು ತ್ತಾನೆಯೋ ಅಷ್ಟೇ ಪ್ರಮಾಣದ ಹಣವನ್ನು ಸರಕಾರವು ನಿಧಿಗೆ ವಂತಿಗೆಯಾಗಿ ಸಲ್ಲಿಸುತ್ತದೆ. ಇದಲ್ಲದೇ ಜುಲ್ಮಾನೆ, ನಿಧಿ, ಹವ್ಯಾಸಿ ನಾಟಕ ಪ್ರದರ್ಶನ, ಹಣ್ಣಿನ ಅಂಗಡಿ, ಸೈಕಲ್

ಸ್ಟ್ಯಾಂಡ, ಕ್ಯಾಂಟೀನದ ಬಾಡಿಗೆ, ಕಾಯಿಪಲ್ಲೆಯ ಕಟ್ಟಿ ಮುಂತಾದ ಬಾಬ್ತುಗಳಿಂದ ಬಂದಿರುವ ಹಣವನ್ನು ಈ ನಿಧಿಗೆ ಜಮಾ ಮಾಡಲಾಗುತ್ತದೆ.

ಕಲ್ಯಾಣನಿಧಿ ಸಮಿತಿಗೆ ಸರಕಾರ, ಉದ್ಯೋಗಪತಿ, ಕಾರ್ಮಿಕರ ಕೆಲ ಉಮೇದುವಾರರನ್ನು ಸದಸ್ಯರನ್ನಾಗಿ ಮಾಡುತ್ತಾರೆ.

ಈ ನಿಧಿಯ ಹಣವನ್ನು ಬಂಢವಲು ಆಗಿ ತೊಡಗಿಸಲು ಬರುವದಿಲ್ಲ. ನಿಧಿಯ ಲೆಕ್ಕವನ್ನು ಸರಿಯಾಗಿ ಬರೆದು ಅಂತಹ ಲೆಕ್ಕಗಳನ್ನು ಲೆಕ್ಕ ಪರಿಶೋಧನೆ ಮಾಡಿಸಲಾಗುವದು.

೧೯೪೬ ರಲ್ಲಿ ನಡೆದ "ಸ್ಟ್ಯಾಂಡಿಂಗ್ ಲೇಬರ ಕಮಿಟಿ" ಈ ವಿಷಯವನ್ನು ಚರ್ಚಿಸಿತು. ಮುಂದೆ ಕಾರ್ಮಿಕ ಮಂಡಳಿಗಳ ಅಧಿವೇಶನದಲ್ಲಿ ಈ ವಿಷಯವು ಬಂದು ರಾಜ್ಯಸರಕಾರಗಳಿಗೆ ಈ ಬಗ್ಗೆ ೧೯೫೨ ಮತ್ತು ೧೯೫೪ರಲ್ಲಿ ಬರೆದು ವಿನಂತಿಸಲಾಯಿತು. ೧೯೬೧ ರಲ್ಲಿ ನಡೆದ ರಾಜ್ಯಗಳ ಕಾರ್ಮಿಕ ಮಂತ್ರಿಗಳ ಅಧಿವೇಶನದಲ್ಲಿ ಈ ಬಗೆಗೆ ಕಾಯ್ದೆಯನ್ನು ರಚಿಸಲು ನಿರ್ಧರಿಸಲಾಯಿತು. ಅದರಂತೆ ಕಾರ್ಮಿಕ ಕಲ್ಯಾಣ ನಿಧಿಅಸ್ತಿತ್ವಕ್ಕೆ ಬಂದಿತು.

ಉತ್ತರಪ್ರದೇಶ, ಮಹಾರಾಷ್ಟ್ರ ರಾಜ್ಯದಲ್ಲಿ ಕಲ್ಲಿದ್ದಲಿ ಚಹದ ತೋಟಗಳು, ಕಬ್ಬಿಣದ ಅದಿರು, ಕಬ್ಬು, ಅಭ್ರಕ ಮುಂತಾದ ಕಾರಖಾನೆಗಳಲ್ಲಿ ಈ ನಿಧಿಯನ್ನು ಸ್ಥಾಪಿಸಲು ಕಾಯ್ದೆಯನ್ನು ಜಾರಿಯಲ್ಲಿ ತರಲಾಗಿರುವದು. ಮತ್ತು ಕಲ್ಯಾಣ ನಿಧಿಯನ್ನು ಕೂಡಿಸುವದಕ್ಕೆ ನಿರ್ಣಯಿಸಲಾಗಿರುವದು.

ಕರ್ನಾಟಕ ರಾಜ್ಯದಲ್ಲಿ ನಡೆದ ಅಂತಹ ಕಲ್ಯಾಣ ಕಾರ್ಯವನ್ನು ಉದಾಹರಿಸುವದೆಂದರೆ, ಕಬ್ಬಿಣ ಅದಿರಿನ ಗಣಿ ಕಾರ್ಮಿಕರಿಗೆ ಸುಮಾರು ೧೦೦೦ ಮನೆಗಳನ್ನು ಕಟ್ಟಿ ಕೊಡಲಾಗಿದೆ. “ಕಾರ್ಮಿಕ ಕಲ್ಯಾಣ ಸಂಸ್ಥೆ”ಯನ್ನು ಸ್ಥಾಪಿಸಲಾಗಿರುವದು. ಕಾರ್ಮಿಕ ಕಮಿಷನರ್ ಅದರ ಅಧ್ಯಕ್ಷನಾಗಿರುವನು. ಕಾರ್ಮಿಕ ಕಾಯ್ದೆಯ ವಿಷಯದಲ್ಲಿ ಅವರು ಸರಕಾರಕ್ಕೆ ಆಗಾಗ್ಗೆ ಸಲಹೆಯನ್ನು ಕೊಡುತ್ತಾರೆ.

೧೯೬೧ರಲ್ಲಿ ೧೫ ಕಾರ್ಮಿಕ ಕಲ್ಯಾಣ ಕೇಂದ್ರಗಳು ಕಾರ್ಯವನ್ನು ಕೈಗೊಳ್ಳುತ್ತಿದ್ದವು. ಕೇಂದ್ರೀಯ ಸಂಸ್ಥೆಯು ತನ್ನ ಕಾರ್ಮಿಕ ಕಲ್ಯಾಣಕ್ಕೆ ಸಹಾಯವನ್ನು ಕದಮನೆ ಎಸ್ಟೇಟದಲ್ಲಿ ಒದಗಿಸಿರುವದು. ಕಾರ್ಮಿಕರಿಗೆ ಅಭ್ಯಾಸ ಕೇಂದ್ರಗಳು, ಗ್ರಂಥಾಲಯಗಳು, ರೇಡಿಯೋ ಹಾಗೂ ಇತರ ಮನೋವಿಕಾಸ ಕೇಂದ್ರಗಳನ್ನು ಪ್ರಾರಂಭಿಸಲಾಯಿತು.

ಗಣಿಒಡೆಯರ, ಕಬ್ಬಿಣ ಆದಿರುಗಳ ಕಾರ್ಮಿಕ ಕಲ್ಯಾಣದ ನಿಧಿ ಸಂಸ್ಥೆಯು ಲಾಭವನ್ನು ಪಡೆದು ವಸತಿ ನಿರ್ಮಾಣ, ವೈದ್ಯಕೀಯ ಸೌಕರ್ಯ, ನೀರಿನ ಪೂರೈಕೆ, ಶಿಕ್ಷಣ, ವಿವಿಧೋದ್ದೇಶ ಕಟ್ಟಡ ಮುಂತಾದ ಸೌಕರ್ಯಗಳನ್ನು ಪಡೆಯಲು ಕಳೆದೆರಡು ವರ್ಷಗಳಿಂದ ಪ್ರಯತ್ನಿಸಲಾಗುತ್ತಿದೆ. ಬೆಂಗಳೂರು, ಹುಬ್ಬಳ್ಳಿ, ಮಂಗಳೂರುಗಳಲ್ಲಿ ಕೇಂದ್ರ ಹಾಗೂ ರಾಜ್ಯಸರಕಾರದಿಂದ ಸ್ಥಾಪಿಸಲ್ಪಟ್ಟ ಕಾರ್ಮಿಕ ಶಿಕ್ಷಣ ಕೇಂದ್ರಗಳಿವೆ. ಇಲ್ಲಿ ಅಭ್ಯಾಸ ಕೊಠಡಿಯ ಸೌಕರ್ಯವಿರುವದು. ಈ ಕಾರ್ಯಾಲಯದಲ್ಲಿ ಕಾರ್ಮಿಕ ಸಮಸ್ಯೆಗಳ ಬಗೆಗೆ ತಿಳುವಳಿಕೆಯನ್ನು ನೀಡುವ ಒಳ್ಳೆಯ ಪುಸ್ತಕಗಳನ್ನು ಸಂಗ್ರಹಿಸಿ ಕಾರ್ಮಿಕರ ವಾಚನಾಭಿರುಚಿಯನ್ನು ಹೆಚ್ಚಿಸಿ ಅವರನ್ನು ಸುಶಿಕ್ಷಿತ ಕಾರ್ಮಿಕರನ್ನಾಗಿಸುವ ಏರ್ಪಾಡನ್ನು ಮಾಡಲಾಗಿದೆ.

ಖಾಸಗಿ ಉದ್ದಿಮೆಯಲ್ಲಿಯೂ ಕಲ್ಯಾಣ ನಿಕ್ಷೇಪ ನಿಧಿಯನ್ನು ಬಳಕೆಯಲ್ಲಿ ತರುವದನ್ನು ಉದ್ದೇಶಿಸಲಾಗಿದೆ.

## (ಈ) ಸಾರ್ವಜನಿಕ ಸೇವಾ ಸಂಸ್ಥೆಯಿಂದ

ಶ್ರಮಜೀವಿಗಳ ದೌರ್ಬಲ್ಯ, ಅಸಹಾಯಕತೆಗಳನ್ನು ಗಮನಿಸಿ ಅನೇಕ ಕ್ಷೇಮ ಸಂಸ್ಥೆಗಳು ಅವರಿಗಾಗಿ ಕಲ್ಯಾಣ ಕಾರ್ಯವನ್ನು ಕೈಗೊಂಡಿದ್ದನ್ನು ನಾವು ಕಾಣಬಹುದು.

ಅಂತಹ ಸೇವಾ ಸಂಸ್ಥೆಗಳನ್ನು ಹೆಸರಿಸುವದಾದರೆ ಮುಂಬೈಯಲ್ಲಿ ಪ್ರೆಸಿಡೆನ್ಸಿ ವುಮೆನ್ಸ ಕೌನ್ಸಿಲ್, ಮೆಟರನಿಟಿ ಇನ್‌ಫ್ರಂಟ ವೆಲಫೇರ್ ಅಸೋಸಿಯೇಶನ್, ವಾಯ್. ಎಂ. ಸಿ. ಎ ಗಳನ್ನು ಉದಾಹರಿಸಬಹುದು.

ಮುಂಬೈಯಲ್ಲಿರುವ ಸಾಮಾಜಿಕ ಸೇವಾ ಕೂಟವು ೧೯೧೧ರಲ್ಲಿ ಪ್ರಾರಂಭಿಸಲ್ಪಟ್ಟು ಮುಂದೆ ಎಮ್. ಎಸ್. ಜೋಶಿಯವರಿಂದ ಅನೇಕ ಚಟುವಟಿಕೆಗಳನ್ನು ಪಡೆಯಿತು. ಅನೇಕ ಗ್ರಂಥಾಲಯುಗಳು, ರಾತ್ರಿಯ ಶಾಲೆಗಳು ಪ್ರಾರಂಭವಾದವು ಸಾಮಾನ್ಯರಿಗೆ ಅಕ್ಷರ ಜ್ಞಾನವನ್ನು ಕೊಡಲಾಯಿತು. ಇಬ್ಬರು ಉದ್ಯೋಗಪತಿಗಳಿಂದ ಕೆಲ ಅನುಕೂಲತೆಯನ್ನು ಪಡೆದುಕೊಂಡು ವರ್ಕಮೆನ್ಸ ಇನ್‌ಸ್ಟಿಟ್ಯೂಟನ್ನು ಪ್ರಾರಂಭಿಸಲಾಯಿತು.

ಬಂಗಾಲದಲ್ಲಿಯ ಮಹಿಳಾ ಸಮಾಜವು ಹಳ್ಳಿಹಳ್ಳಿಗಳಿಗೆ ಹೋಗಿ ವಿದ್ಯಾಭ್ಯಾಸ ಹಾಗೂ ಆರೋಗ್ಯದ ಬಗೆಗೆ ತಿಳುವಳಿಕೆಯನ್ನು ಕೊಡುತ್ತಿದೆಯಲ್ಲದೇ ಅದರ ಬಗೆಗೆ ಲಕ್ಷ್ಯವನ್ನು ಪೂರೈಸಲಾಗುತ್ತಿರುವದು.

ಮುಂಬೈ ನಗರದಲ್ಲಿ ಬೃಹತ್ ಸೌಧಗಳನ್ನು ಕಟ್ಟುವ ಕಡೆಗಳಲ್ಲಿ ದಿಕ್ಕಿಲ್ಲದೇ ಉಡಿಗೆ-ತೊಡಿಗೆಯಿಲ್ಲದ

ಧೂಳು ಮತ್ತು ಮಲಿನತೆಯಲ್ಲಿ ಅಲೆದಾಡುವ ಹಸುಳೆಗಳನ್ನು ನಾವು ಅಲ್ಲಲ್ಲಿ ಕಾಣಬಹುದು. ಅಂತಹ ಪರಿಸ್ಥಿತಿಯ ವಿರುದ್ಧ ಮಕ್ಕಳನ್ನು ಸಂರಕ್ಷಿಸಲು "ಮಹಿಳಾ ಸ್ವಯಂಸಂಸ್ಥೆ"ಯೊಂದು ತಲೆಯೆತ್ತಿರುವದು.

ಈ ಸಂಸ್ಥೆಯು ಮನೆಗಳನ್ನು ಕಟ್ಟುವ ಮೂರು ಕೇಂದ್ರಗಳನ್ನು ಪ್ರಾರಂಭಿಸಿದೆ. "ಸಂಚಾರಿ ಶಿಶು ಸಂಗೋಪನಾ ಕೇಂದ್ರ"ವೊಂದನ್ನು ಸ್ಥಾಪಿಸಿದೆ. ಪಟೇಲಹಾಲ್, ಪರೇಡಗ್ರೌಂಡ,ನಾರಿಮನ್ ಪಾಯಿಂಟುಗಳಲ್ಲಿ ಅನೇಕಕಟ್ಟಡಗಳು ರಚನೆಯಾಗಿವೆ. ಕಟ್ಟಡಗಳ ಕೂಲಿಕಾರರ ಮಕ್ಕಳ ಮೇಲ್ವಿಚಾರಣೆಯನ್ನು ಹಗಲುಹೊತ್ತು ಈ ಸಂಚಾರೀ ಶಿಶು ವಿಹಾರಗಳು ನೋಡಿಕೊಳ್ಳುತ್ತಿವೆ. ಈ ಮೂರೂ ಕೇಂದ್ರಗಳಲ್ಲಿ ೩೦೦ ಮಕ್ಕಳಿಗೆ ಆಶ್ರಯವನ್ನು ನೀಡಲಾಗಿದೆ.

ಕೂಲಿಗೆ ಹೋಗುವ ತಾಯಂದಿರು ಕೆಲಸ ಪ್ರಾರಂಭಿಸುವದಕ್ಕೆ ಮುನ್ನ ಮಕ್ಕಳನ್ನು ಇಲ್ಲಿ ಬಿಡುತ್ತಾರೆ. ಮಕ್ಕಳಿಗೆ ಸ್ನಾನ ಮಾಡಿಸಿ. ಉಡಿಗೆ ತೊಡಿಸಿ ತೊಟ್ಟಿಲಲ್ಲಿ ಮಲಗಿಸುತ್ತಾರೆ. ಮಕ್ಕಳಿಗೆ ಹಾಲು ಕಿಚಡಿ, ಔಷಧಿ ಮತ್ತು ಸತ್ವಭರಿತ ಆಹಾರ ನೀಡುವ, ಹಾಗೂ ದೇವಿ ಹಾಕುವ ವ್ಯವಸ್ಥೆಯುಂಟು.

ಇಲ್ಲಿಯ ಕಾರ್ಯವನ್ನು ನೋಡಿಕೊಂಡು ಹೋಗುವದಕ್ಕೆ ಮೂವರು ಶಿಕ್ಷಕಿಯರು ಇದ್ದಾರೆ. ಶಾಲೆಗೆ ಬೇಕಾಗುವ ಒಳ್ಳೆಯ

ಅಡಿಗೆಗಳ ಸಾಮಗ್ರಿಗಳು ದಾನವಾಗಿ ಬಂದಿರುವವು. ಪ್ರತಿ ಕೇಂದ್ರದ ಮಾಸಿಕ ವೆಚ್ಚವು ೧,೮೦೦ ರೂಪಾಯಿಗಳಾಗುತ್ತದೆ.

ದೆಹಲಿಯಲ್ಲಿ ಇಂತಹ ಸಂಸ್ಥೆಯನ್ನು ಪ್ರಾರಂಭಿಸಿದಾಗ ಯಶಸ್ವಿಯಾಯಿತು. ಮತ್ತು ಇದು ಮುಂಬೈ ಮಹಿಳಾ ಸಮಾಜ ಸೇವಕರ ಗಮನ ಸೆಳೆಯಿತು. ಮುಂದೆ ಕಳೆದ ವರುಷ ಈ ಸಂಸ್ಥೆ ತಲೆಯೆತ್ತಿದೆ.

ಸಾರ್ವಜನಿಕ ಸೇವಾ ಸಂಸ್ಥೆಯು ದೇಶದ ಕೆಲ ಪ್ರಮುಖ ನಗರಗಳಲ್ಲಿ ಮಾತ್ರ ತನ್ನ ಸೇವಾ ಕಾರ್ಯವನ್ನು ಸ್ವಪ್ರೇರಣೆಯಿಂದ ಹಮ್ಮಿಕೊಂಡಿರುವದು. ಮತ್ತು ದೇಶದ ಗಾತ್ರ ಮತ್ತು ಶ್ರಮಜೀವಿಗಳ ಸಂಖ್ಯೆಯನ್ನು ಗಮನಿಸಿದಾಗ ಇದು ಅತಿ ಅಲ್ಪ ಎನ್ನಬಹುದಾದರೂ ಅದರ ಹಿಂದಿರುವ ಮಾನವಸೇವೆಯ ಅಂಶ ಮೆಚ್ಚುವಂತಹದು.

# ೫. ಕಾನೂನಿಗನುಸಾರವಾಗಿ ನಡೆಯುವ ಕಲ್ಯಾಣ ಕಾರ್ಯಗಳು

ಸರಕಾರವು ಕಾನೂನಿನ ಮುಖಾಂತರ ತನ್ನಲ್ಲಿರುವ ಅಧಿಕಾರದ ಮೇರೆಗೆ ಕಾರ್ಮಿಕ ಸುರಕ್ಷಿತತೆಯ ಮಟ್ಟವನ್ನು ಕಾಯ್ದುಕೊಂಡು ಹೋಗುವದಕ್ಕಾಗಿ ಅನೇಕ ಸಾಮಾಜಿಕ ಭದ್ರತೆಯ ಶಾಸನಗಳನ್ನು ಮಾಡಿರುತ್ತದೆ. ಉದ್ಯೋಗಪತಿಯು ಕಾರ್ಮಿಕನಿಗೆ ಹೆಚ್ಚಿನ ಅನುಕೂಲತೆಯನ್ನು ಒದಗಿಸದೇ ಇರುವದರಿಂದ ಸರಕಾರವು ಅಂತಹ ಕಾನೂನುಗಳನ್ನು ಬಳಕೆಯಲ್ಲಿ ತಂದಿದೆ. ಈ ಕಾಯ್ದೆಗಳು ಉದ್ದಿಮೆಯ ಮಾಲೀಕನಿಗೆ ಬಂಧನಕಾರಿಯಾಗುತ್ತವೆ. ಇವುಗಳನ್ನು ಈ ಮೊದಲು ವಿವರಿಸಿದಂತೆ, ಕೇಂದ್ರ ಮತ್ತು ರಾಜ್ಯ ಸರಕಾರದ ಕಾನೂನುಗಳೆಂದು ವಿಂಗಡಿಸಲಾಗಿರುವದು. ಪ್ರಥಮವಾಗಿ ಕಾಯ್ದೆಯ ಮೇರೆಗೆ ಕೇಂದ್ರ ಸರಕಾರದಿಂದ ಕೈಗೊಂಡ ಕಲ್ಯಾಣಕಾರ್ಯಗಳಲ್ಲಿ ಕೆಲವನ್ನು ನೋಡುವಾ.

## (ಅ) ಕೇಂದ್ರ ಸರಕಾರದಿಂದ

೧೯೨೨ ರಲ್ಲಿ ಅಖಿಲಭಾರತ ಕಲ್ಯಾಣ ಅಧಿವೇಶನ ಮುಂಬೈಯಲ್ಲಿ ಜರುಗಿದಾಗ ಕಾರ್ಮಿಕ ಕಲ್ಯಾಣದ ವಿಷಯವನ್ನು ಪ್ರಸ್ತಾಪಿಸಲಾಯಿತು. ೧೯೨೬ರಲ್ಲಿ "ಅಂತರ್‌ರಾಷ್ಟ್ರೀಯ ಕಾರ್ಮಿಕ ಸಂಸ್ಥೆ"ಯ ಸಮ್ಮತಿಯ ಮೇರೆಗೆ ಕೇಂದ್ರ ಸರಕಾರವು ರಾಜ್ಯ ಸರಕಾರಗಳಿಗೆ ಈ ಕಾರ್ಯವನ್ನು ಕೈಗೊಳ್ಳಲು ಪ್ರಾರ್ಥಿಸಿತು.

ದ್ವಿತೀಯ ಮಹಾಯುದ್ಧದ ನಂತರ ಸಮರ ವಸ್ತು ಉತ್ಪಾದಿಸುತ್ತಿರುವ ಕಾರಖಾನೆಗಳಲ್ಲಿರುವ ಕಾರ್ಮಿಕರ ಕಲ್ಯಾಣ ಕೆಲಸವನ್ನು ಕೈಗೊಂಡಿದ್ದಿತು. ಅವು ಉತ್ಪಾದನಾ ಸಾಮರ್ಥ್ಯವನ್ನು ಪಡೆದ ನಂತರ ಅನೇಕ ಕಾಯ್ದೆಗಳನ್ನು ರೂಪಿಸಿ ಬಳಕೆಯಲ್ಲಿ ತಂದಿತು.

ಮೊದಲನೆಯ ಪಂಚವಾರ್ಷಿಕ ಯೋಜನೆಯಲ್ಲಿ ೬.೭೪ ಕೋಟಿ ರೂಪಾಯಿಗಳನ್ನು, ದ್ವಿತೀಯ ಯೋಜನೆಯಲ್ಲಿ ೨೯.೦೦ ಕೋಟಿ ರೂಪಾಯಿಗಳನ್ನು, ಮೂರನೆಯ ಯೋಜನೆಯಲ್ಲಿ ೭೧.೦೮ ಕೋಟಿ ರೂಪಾಯಿಗಳನ್ನು ಕೂಲಿಕಾರರು ಮತ್ತು ಅವರ ಕಲ್ಯಾಣಕ್ಕೆ ವಿನಿಯೋಗಿಸಲಾಯಿತು.

ಕೇಂದ್ರ ಸರಕಾರದಿಂದ ನಡೆದ ಕಾರ್ಮಿಕ ಕಲ್ಯಾಣಗಳಲ್ಲಿ ಕೆಲವನ್ನು ಇಲ್ಲಿ ಉದಾಹರಿಸಬಹುದು :

i) **ರೇಲ್ವೆ :** ೧೯೬೦-೬೧ ರಲ್ಲಿ ೭೭ ಆಸ್ಪತ್ರೆಗಳು, ೪೮೦ ಚಿಕಿತ್ಸಾಲಯುಗಳು ಇದ್ದವು. ರಾಂಚಿಯಲ್ಲಿ ವಿಶ್ರಾಂತಿಧಾಮ, ಗುಡ್ಡದ ರೇಲ್ವೆ ನಿಲ್ದಾಣದಲ್ಲಿ ಸ್ಥಾಪಿಸಲಾಗಿರುವದು. ಅದಲ್ಲದೇ ಪ್ರಸೂತಿ, ಮಕ್ಕಳ ಕಲ್ಯಾಣಕೇಂದ್ರಗಳನ್ನು ರೇಲ್ವೆಗಾಗಿ ಇರುವ ನಿಧಿಯಿಂದ ನಡೆಸಲಾಗುತ್ತಿದೆ. ರೇಲ್ವೆ ಕೂಲಿಕಾರರ ಮಕ್ಕಳಿಗೆ ಶಾಲೆಗಳು, ಶಿಷ್ಯವೃತ್ತಿ ಮತ್ತು ಊಟದ ವ್ಯವಸ್ಥೆಯನ್ನು ಮಾಡಲಾಗಿದೆ. ೬೫೫ ಶಾಲೆಗಳು ವಿದ್ಯಾರ್ಥಿಗಳಲ್ಲಿ ಉತ್ಸಾಹವನ್ನು ಹುಟ್ಟಿಸುವದಕ್ಕೆ ಪ್ರೋತ್ಸಾಹಿಸುವದಕ್ಕೆ ವಿವಿಧ ಸಂಘ ಸಂಸ್ಥೆಗಳು ಮತ್ತು ಮಂಡಳಿಗಳು, ಹೊರ ಮತ್ತು ಒಳವಲಯುದಲ್ಲಿ ಮನರಂಜನೆ ಮತ್ತು ಮಕ್ಕಳ ಶಿಬಿರವನ್ನು ನಡೆಸುವದು ಇತ್ಯಾದಿಗಳನ್ನು ಸಹ ವ್ಯವಸ್ಥೆ ಮಾಡಲಾಗಿವೆ.

ಸುಮಾರು ೨೩೪ ಕ್ಯಾಂಟೀನುಗಳಲ್ಲಿ ಚಹ ಮತ್ತು ಊಟದ ವ್ಯವಸ್ಥೆಯನ್ನು ಮಾಡಲಾಗಿದೆ. ೧೬೭ ಗ್ರಾಹಕರ ಸರಕಾರೀ ಅಂಗಡಿಗಳು, ೧೦೦ ಆಹಾರಧಾನ್ಯ ಅಂಗಡಿಗಳು, ೩೫ ಸಂಚಾರೀ ಧಾನ್ಯದ ಅಂಗಡಿಗಳು ಬಂದವು. ಇತ್ತೀತ್ತಲಾಗಿ ಕ್ರೀಡಾಕೂಟಗಳು ಅಖಿಲಭಾರತ ಮಟ್ಟದಲ್ಲಿ ನಡೆಯುತ್ತಿವೆ.

ii) **ಬಂದರು :** ಮುಖ್ಯವಾದ ಬಂದರುಗಳಲ್ಲಿ ಅರ್ಹನಾದ ವೈದ್ಯನಿಂದೊಡಗೂಡಿದ ಚಿಕಿತ್ಸಾಲಯುವನ್ನು ಪ್ರಾರಂಭಿಸಲಾಗಿದೆ. ಮುಂಬೈ, ಮದ್ರಾಸ, ವಿಶಾಖಪಟ್ಟಣ,

ಕೊಚಿನ್‌ದಲ್ಲಿ ಸರಕಾರಿ ಸಾಲಸಂಘಗಳು ಪ್ರಾರಂಭವಾಗಿವೆ. ಮನರಂಜನ ಕೇಂದ್ರ ಹಾಗೂ ಕ್ಯಾಂಟೀನುಗಳನ್ನು ಪ್ರಮುಖ ಬಂದರುಗಳಲ್ಲಿ ಪ್ರಾರಂಭಿಸಲಾಯಿತು. ಕೂಲಿಕಾರರ ಮಕ್ಕಳಿಗಾಗಿ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಲಾಯಿತು.

iii) **ಅಂಚೆ ಮತ್ತು ತಂತಿ ಇಲಾಖೆ :** ೧೬ ಸಹಕಾರೀ ಸಂಘ, ೧೪ ಆಹಾರಧಾನ್ಯದ ಅಂಗಡಿ, ೩೨೦ ಕ್ಯಾಂಟೀನು, ೫೨೧ ಫಲಾಹಾರ ಮಂದಿರ, ೩೪ ಚಹದ ಅಂಗಡಿ, ೧೧ ಚಿಕಿತ್ಸಾಲಯ, ೮೩೧ ಮನರಂಜನಾ ಕೂಟ. ೧೮೦ ವಿಶ್ರಾಂತಿ ಗೃಹ, ಕಾರ್ಮಿಕರ ಆಸ್ಪತ್ರೆಯಲ್ಲಿ ೧೬೭ ಹಾಸಿಗೆಗಳನ್ನು ಕ್ಷಯರೋಗದಿಂದ ಬಳಲುತ್ತಿರುವವರಿಗೆ ಕಾಯ್ದಿಡಲಾಯಿತು.

## (ಬ) ರಾಜ್ಯಸರಕಾರಗಳಿಂದ

ಕಾರ್ಮಿಕ ಕಲ್ಯಾಣಕ್ಕೆ ರಾಜ್ಯಸರಕಾರಗಳಿಂದ ಅನೇಕ ಕಾಯ್ದೆಗಳನ್ನು ಪಾಸು ಮಾಡಲಾಗಿರುವದು. ಅವುಗಳಲ್ಲಿ ಪ್ರಮುಖವಾದವುಗಳನ್ನು ಇಲ್ಲಿ ಪರಿಶೀಲಿಸುವಾ :

i) **ಕಾರಖಾನೆಯ ಕಾಯ್ದೆ–೧೯೪೮ :** ಉದ್ಯೋಗಪತಿ ಹಾಗೂ ಅವನ ಅಧೀನದಲ್ಲಿ ಕೆಲಸ ಮಾಡುವವರ ನಡುವಿರುವ ಸಂಬಂಧವನ್ನು ಈ ಕಾನೂನು ನಿಯಂತ್ರಣಕ್ಕೆ ಒಳ

ಪಡಿಸುತ್ತದೆ. ಕೆಲಸಗಾರರ ಕಾರ್ಯಕುಶಲತೆ, ವಿಧಾನ, ಗುಣ ಮತ್ತು ಪರಿಣಾಮಗಳ ಮೇಲೆ ಯಜಮಾನನ ಹತೋಟಿ ಮುಂತಾದವುಗಳು ಈ ಕಾಯ್ದೆಯ ಕಕ್ಷೆಯಲ್ಲಿ ಬರುತ್ತವೆ.

೧೮೮೧ರಲ್ಲಿ ಪ್ರಪ್ರಥಮವಾಗಿ ಈ ಕಾಯ್ದೆಯನ್ನು ಪಾಸು ಮಾಡಲಾಯಿತು. ಮುಂದೆ ೧೯೪೮ ರಲ್ಲಿ ಕಾರಖಾನೆಯಲ್ಲಿಯ ಕಾಯ್ದೆಯು ಪ್ರಾಮುಖ್ಯತೆ ಪಡೆಯಿತು.

ಈ ಕಾಯ್ದೆಯ ಮೇರೆಗೆ ಕಾರಖಾನೆಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು. ಮೊದಲನೆಯದಾಗಿ ವಿದ್ಯುತ್‌ನಿಂದ ನಡೆಯುವ ಅಥವಾ ಯಾಂತ್ರಿಕ ಶಕ್ತಿಯಿಂದ ಉತ್ಪಾದನೆಯನ್ನು ಕೈಕೊಳ್ಳುವದು. ಮತ್ತೊಂದು ಯಾಂತ್ರಿಕ ಶಕ್ತಿಯ ನೆರವು ಇಲ್ಲದೇ ಉತ್ಪಾದನೆಯ ಕಾರ್ಯವನ್ನು ನಡೆಸುವದು.

ಮೊದಲನೆಯ ವಿಧದಲ್ಲಿ ಹತ್ತು ಅಥವಾ ಹತ್ತಕ್ಕಿಂತ ಹೆಚ್ಚು ಹಾಗೂ ಎರಡನೆಯ ವಿಧದಲ್ಲಿ ಇಪ್ಪತ್ತು ಅಥವಾ ಅದಕ್ಕಿಂತ ಹೆಚ್ಚು ಉದ್ಯೋಗಿಗಳು ಇದ್ದರೆ ಅಂಥವುಗಳಿಗೆ ಈ ಕಾರಖಾನೆಯ ಕಾಯ್ದೆಯು ಅನ್ವಯಿಸುವದು.

ರೇಲ್ವೆ, ಹಡಗಿನ ಸಂಸ್ಥೆ, ಗಣಿಗಳು ಮತ್ತು ಗುತ್ತೇದಾರರು ಈ ಕಾಯ್ದೆಯ ಚೌಕಟ್ಟಿನಲ್ಲಿ ಬರುವದಿಲ್ಲ.

ಈ ಕಾಯ್ದೆಯಲ್ಲಿರುವ ಅಂಶಗಳೆಂದರೆ:

೧) ಕಾರಖಾನೆಯ ಸ್ವಚ್ಛತೆಯನ್ನು ಕಾಯ್ದುಕೊಂಡು ಹೋಗಬೇಕು. ಕಸಕೊಳೆಯನ್ನು ಕಿತ್ತು ಹಾಕಬೇಕು.

೨) ಕಾರಖಾನೆಯ ಒಳಬದಿಯಲ್ಲಿರುವ ಆವರಣ, ಖೋಲಿ ಮುಂತಾದವುಗಳಿಗೆ ಸುಣ್ಣ ಮತ್ತು ಬಣ್ಣವನ್ನು ಹಚ್ಚಿ ಉತ್ತಮವಾಗಿ ಇಡಬೇಕು.

೩) ಕಾರ್ಮಿಕನ ಕೆಲಸದ ಪ್ರದೇಶದಲ್ಲಿ ಆರ್ದ್ರತೆ ಅಥವಾ ತೇವವಾಗಲೀ ಆಗದಂತೆ ನೋಡಿಕೊಳ್ಳಬೇಕು.

೪) ಗಾಳಿ ಮತ್ತು ಬೆಳಕಿನ ಅನುಕೂಲತೆಯು ಸಮರ್ಪಕವಾಗಿ ಇರಬೇಕು. ಸ್ವಚ್ಛವಾದ ಹವೆಯ ಅನುಕೂಲತೆಯನ್ನು ಒದಗಿಸಬೇಕು.

೫) ಕಾರಖಾನೆಯ ಉಷ್ಣ ತಾಮಾನವನ್ನು ಹಿತಕರವಾದ ಮಟ್ಟದಲ್ಲಿ ಇಡಬೇಕು.

೬) ಅಪಾಯಕಾರೀ ಯಂತ್ರಗಳ ಸುತ್ತಲೂ ಬೇಲಿ ಅಥವಾ ಕಟಾಂಜನಗಳನ್ನು ನಿರ್ಮಿಸಬೇಕು.

೭) ಗಂಡಸರಿಗಾಗಿ ಹಾಗೂ ಹೆಂಗಸರಿಗಾಗಿ ಪ್ರತ್ಯೇಕವಾದ ಶೌಚಕೂಪ ಹಾಗೂ ಮೂತ್ರಿಗಳ ವ್ಯವಸ್ಥೆ ಮಾಡಬೇಕು.

೮) ೧೪ ವರುಷದ ಕೆಳಗಿನ ಮಕ್ಕಳನ್ನು ಕೆಲಸಕ್ಕೆ ತೆಗೆದು ಕೊಳ್ಳುವದನ್ನು ನಿರ್ಬಂಧಿಸಲಾಗಿರುವದು.

೯) ವಾರದಲ್ಲಿ ೪೮ ತಾಸುಗಳಿಗಿಂತ ಹೆಚ್ಚಿನ ಅವಧಿಯ ವರೆಗೆ ಕಾರ್ಮಿಕನಿಂದ ಕೆಲಸವನ್ನು ತೆಗೆದುಕೊಳ್ಳು ವಂತಿಲ್ಲ.

೧೦) ಮಕ್ಕಳು ಅಥವಾ ಹೆಂಗಸರು ಯಂತ್ರವು ಚಲನೆ ಯಲ್ಲಿದ್ದಾಗ ಅವುಗಳನ್ನು ತೊಳೆಯುವದನ್ನಾಗಲೀ, ಎಣ್ಣೆಯನ್ನು ಹಾಕುವದನ್ನಾಗಲೀ, ರಿಪೇರಿ ಮಾಡುವ ದನ್ನಾಗಲೀ ಪ್ರತಿಬಂಧಿಸಲಾಗಿರುವದು.

೧೧) ಪ್ರತಿ ೧೫೦ ಕಾರ್ಮಿಕರಿಗೆ ಒಂದರಂತೆ ಪ್ರಥಮ ಚಿಕಿತ್ಸೆಯ ಪೆಟ್ಟಿಗೆಯನ್ನು ಇಡಬೇಕು.

೧೨) ೫೦೦ ಕೆಲಸಗಾರರಿರುವ ಪ್ರತಿ ಕಾರಖಾನೆಯಲ್ಲಿಯೂ ಆಂಬ್ಯುಲನ್ಸ್ ವಾಹನ ಇಡಬೇಕು.

ಕಾರಖಾನೆಗಳ ಕಾಯ್ದೆಗೆ ಸದೃಶವಾದ ಕಾಯ್ದೆ ಗಳನ್ನು ಗಣಿ, ಪ್ಲಾಂಟೇಶನ್ ಮತ್ತು ಬಂದರು ಕಾರ್ಮಿಕ ರಿಗೆ ತರಲಾಯಿತು. ಉದ್ಯೋಗದಾತ, ಸರಕಾರ ಮತ್ತು ಉದ್ಯೋಗಿಗಳಿಂದ ಪಡೆದ ಅಂಶ ಮತ್ತು ದಾನಗಳಿಂದ ರಚಿ ಸಿದ ನಿಧಿಯಿಂದ ಈ ಸೌಲಭ್ಯವನ್ನು ಒದಗಿಸಲಾಗುತ್ತಿದೆ.

ಇಂತಹ ಕಾಯ್ದೆಯು ಭಾರತದಲ್ಲಿಯಷ್ಟೇ ಅಲ್ಲ ಅಮೇ ರಿಕ, ಮತ್ತು ಇಂಗ್ಲಂಡ ದೇಶದಲ್ಲಿಯೂ ಇರುವದುಂಟು.

ಅಮೇರಿಕೆಯಲ್ಲಿ ಪ್ರತಿಕೂಲವಾಗಿ ಕೆಲಸ ಮಾಡುವದನ್ನು ನಿರ್ಬಂಧಿಸಲಾಗಿರುವದು. ಹೆಚ್ಚಿನ ಅವಧಿಯು ಕೆಲಸ ಮಾಡುವದನ್ನು ತಡೆಯಲಾಗಿರುವದು.

ಇಂಗ್ಲಂಡ ದೇಶದಲ್ಲಿ ಕಾರ್ಮಿಕ ಸಂರಕ್ಷಣಾ ಕಾಯ್ದೆಯ ಮೇರೆಗೆ ಸುರಕ್ಷಿತತೆ ಕಲ್ಯಾಣಕಾರ್ಯಗಳನ್ನೂ ಯಾವನೂ ದುರುಪಯೋಗಪಡಿಸಿಕೊಳ್ಳುವಂತಿಲ್ಲ. ಕಾಯ್ದೆಯ ಮೇರೆಗೆ ಅವನ್ನು ಉಪಭೋಗ ಮಾಡಬೇಕಾಗುವದು. ಯಾವದೇ ಕಾರ್ಮಿಕನು ಅಂತಹ ಹಕ್ಕುಗಳನ್ನು ಉದ್ದೇಶಪೂರ್ವಕವಾಗಿ ಅಥವಾ ಅಕಾರಣವಾಗಿ ದುರುಪಯೋಗಪಡಿಸಿದ್ದಾದರೆ ಅಂತಹ ಕಾರ್ಮಿಕನನ್ನು ಶಿಕ್ಷಿಸಲಾಗುವದು. ಅಥವಾ ೭೦ ಪೌಂಡುಗಳವರೆಗೆ ದಂಡವನ್ನು ಕಾರಖಾನೆಯ ಕಾಯ್ದೆ ೧೯೩೭ರ ಮೇರೆಗೆ ವಿಧಿಸಬಹುದು.

## ii) ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ೧೯೨೩

ಕಾರ್ಮಿಕನ ದುಡಿಮೆಯ ಸಮಯದಲ್ಲಿ ಅವನ ಆರೋಗ್ಯ ಕೆಡದಂತೆ ಮತ್ತು ಅವನ ನೆಮ್ಮದಿಗೆ ಭಂಗ ಬರದಂತೆ ನೋಡಿಕೊಳ್ಳುವದಕ್ಕಾಗಿ ಈ ಕಾಯ್ದೆಯನ್ನು ಬಳಕೆಯಲ್ಲಿ ತರಲಾಗಿದೆ.

ಕಾರ್ಮಿಕನ ತಿಂಗಳ ವೇತನವು ೫೦೦ ರೂಪಾಯಿ ಮೀರದೇ ಇದ್ದರೆ ಅವನಿಗೆ ಈ ಕಾಯ್ದೆಯು ಅನ್ವಯಿಸು

ವದು. ಕಾರಖಾನೆಯಲ್ಲಿ ಕಾರ್ಮಿಕನು ದುಡಿಯುತ್ತಿರುವಾಗ ಸಂಭವನೀಯ ಘಟನೆಗಳ ಮೇಲೆ ಅವನಿಗೆ ಪರಿಹಾರವು ದೊರೆಯುತ್ತದೆ. ಅಂತಹ ಪರಿಹಾರಧನವೆಂದರೆ,

೧) ಕಾರ್ಮಿಕನು ತಾತ್ಕಾಲಿಕವಾಗಿ ಕೆಲಸಕ್ಕೆ ಯೋಗ್ಯನಲ್ಲದಿದ್ದರೆ ಅವನಿಗೆ ಒಂದು ತಿಂಗಳವರೆಗೆ ಪರಿಹಾರ ಧನವನ್ನು ಕೊಡಬೇಕಾಗುತ್ತದೆ. ಈ ಅವಧಿಯನ್ನು ಸುಮಾರು ಐದು ವರ್ಷಗಳ ವರೆಗೆ ವೈದ್ಯರ ಶಿಫಾರಸಿನ ಮೇರೆಗೆ ವಿಸ್ತರಿಸಬಹುದು.

೨) ಕಾರ್ಮಿಕನು ಕೆಲಸಕ್ಕೆ ಸಂಪೂರ್ಣವಾಗಿ ಯೋಗನಲ್ಲದಿದ್ದರೆ ಅವನಿಗೆ ಕೊಡುವ ಪರಿಹಾರ ಧನವು ೬೦೦ ರೂಪಾಯಿ ಇಂದ ೬೩೦೦ ರೂ. ಗಳ ವರೆಗೆ ಅವನು ಪಡೆಯುವ ಪಗಾರದ ಮೇಲೆ ನಿರ್ಣಯಿಸಲಾಗುತ್ತದೆ.

೩) ಕಾರ್ಮಿಕನು ಕಾರಖಾನೆಯಲ್ಲಿ ಮರಣಹೊಂದಿದರೆ ಅದಕ್ಕೆ ಕಾರ್ಮಿಕನೇ ಕಾರಣವಿರಲಿ, ಅಥವಾ ಮಾಲೀಕನೇ ಕಾರಣವಿರಲಿ ಮರಣ ಹೊಂದಿದ ಕಾರ್ಮಿಕನ ನೇರವಾದ ಸಂಬಂಧಿಕರಿಗೆ ಪರಿಹಾರವನ್ನು ಕೊಡಬೇಕಾಗುತ್ತದೆ. ಈ ಹಣವು ೫೦೦ ರೂಪಾಯಿ ಇಂದ ೪೫೦೦ ರೂಪಾಯಿಗಳ ವರೆಗೆ ಇರುತ್ತದೆ.

ಕಾರ್ಮಿಕ ಪರಿಹಾರದ ಮೊಬಲಗನ್ನು ಇತ್ಯರ್ಥ ಮಾಡಲು ಪ್ರತಿಯೊಂದು ರಾಜ್ಯಸರಕಾರವು ಒಬ್ಬ ಕಮೀಷನರನನ್ನು

ನೇಮಿಸಿರುವದುಂಟು. ಕಾರ್ಮಿಕನು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯ ಮೇರೆಗೆ ಸಿವ್ಹಿಲ್ ನ್ಯಾಯಾಲಯದಲ್ಲಿ ದಾವೆಯನ್ನು ಮಾಡಲು ಅವಕಾಶವಿರುವದುಂಟು.

**iii) ಕೂಲಿ ಪಾವತಿಯ ಕಾಯ್ದೆ ೧೯೩೬**

ಕಾರಖಾನೆ ಮತ್ತು ರೇಲ್ವೆ ಉದ್ಯೋಗಿಗಳಿಗೆ ಕೂಲಿ ಮಾಡುವ ಸಮಯ ವಿಧಾನಗಳನ್ನು ಈ ಕಾಯ್ದೆಯಲ್ಲಿ ಹೇಳಲಾಗಿರುವದು. ಟ್ರಾಮ್‌ವೇ, ಮೋಟಾರು ಸಾರಿಗೆ, ಬಂದರು, ಗಣಿ, ಪ್ಲಾಂಟೇಶನ್, ಕಾರ್ಯಾಗಾರ ಮುಂತಾದ ಕೈಗಾರಿಕೆಗಳು ಕೂಲಿಯ ಪಾವತಿಯ ಕಾಯ್ದೆಯಲ್ಲಿ ಬರುತ್ತವೆ.

೧೦೦೦ ಜನರಿಗಿಂತ ಕಡಿಮೆ ಉದ್ಯೋಗಿಗಳಿರುವ ಪ್ರತಿಯೊಂದು ಉದ್ದಿಮೆಯು, ಕೂಲಿಯ ಅವಧಿಯ ಕೊನೆಯ ಏಳು ದಿನಗಳ ಅವಧಿಯೊಳಗಾಗಿ ಪಾವತಿಯನ್ನು ಮಾಡಬೇಕು. ಕೂಲಿಯ ಮೊಬಲಗಿನಲ್ಲಿ ಮಾತ್ರ ಹಣದ ಪಾವತಿಯ ಕಡಿತವನ್ನು ಮಾಡುವದಕ್ಕೆ ಕಾಯ್ದೆಯ ಪ್ರಕಾರ ಅಧಿಕಾರ ನೀಡುವದಕ್ಕೆ ಅನುಮತಿಯಿರುವದುಂಟು. ಉಳಿದವುಗಳಿಗೆ ಅನುಮತಿಯಿರುವದಿಲ್ಲ.

ಕೂಲಿ ಪಾವತಿಯ ನಿಬಂಧನೆಗಳ ಸಾರಾಂಶವನ್ನು ಪ್ರತಿಯೊಬ್ಬ ನೇಮಕದಾರನು ಇಂಗ್ಲೀಷದಲ್ಲಿ ಅಥವಾ ಬಹುಸಂಖ್ಯಾಕ ಭಾಷೆಯಲ್ಲಿ ಬರವಣಿಗೆಯಲ್ಲಿ ಬರೆದು ಪ್ರದರ್ಶಿಸಬೇಕು.

iv) ಕನಿಷ್ಠ ಕೂಲಿಯ ಪಾವತಿ ಕಾಯ್ದೆ ೧೯೪೮

ಸುಮಾರು ೧೦೦೦ ಕೆಲಸಗಾರರಿಗಿಂತ ಹೆಚ್ಚಿಗೆ ಯಿರುವ ಕೆಲ ಉದ್ದಿಮೆಗಳಲ್ಲಿ ಈ ಕಾಯ್ದೆಯನ್ನು ಜಾರಿಗೆ ತರಲಾಗಿರುವದು. ಉಣ್ಣೆ, ಜಮಖಾನೆ ತಯಾರಿಕೆ, ಶಾಲು ತಯಾರಿಸುವದು, ಹಿಟ್ಟಿನ ಗಿರಣಿಗಳು, ಉಣ್ಣೆಯ ಕಾರ್ಖಾನೆ ಗಳು, ತಂಬಾಕು, ಬೀಡಿಯನ್ನು ತಯಾರಿಸುವದು, ಅಕ್ಕಿಯ ಗಿರಣಿ, ತೋಟಗಾರಿಕೆ, ಕಲ್ಲು ಒಡೆಯುವದು ಪುಡಿ ಮಾಡು ವದು, ಸಾರ್ವಜನಿಕ ಸಾರಿಗೆ, ಒಕ್ಕಲುತನ ಮುಂತಾದವು ಗಳನ್ನು ಇಲ್ಲಿ ಹೆಸರಿಸಬಹುದು.

ಕೇಂದ್ರ ಮತ್ತು ರಾಜ್ಯ ಸರಕಾರಗಳಲ್ಲಿ "ಸಲಹಾ ಸಮಿತಿ"ಗಳನ್ನು ಸ್ಥಾಪಿಸಲಾಗಿರುವದು. ಈ ಸಮಿತಿಗಳಿಗೆ ಕಾರ್ಮಿಕ ಪ್ರತಿನಿಧಿಗಳು ಸದಸ್ಯರಾಗಿರುವರು. ಮಾರು ಕಟ್ಟೆಯ ಬೆಲೆಯನ್ನು ಆಧರಿಸಿ ಸಮಿತಿಯು ಕನಿಷ್ಠ ಕೂಲಿ ಯನ್ನು ನಿರ್ಧರಿಸಲು ಈ ಕಾಯ್ದೆಯು ಅನುವು ಮಾಡಿ ಕೊಡುತ್ತದೆ. ಈ ಕೂಲಿಯನ್ನು ಹೆಚ್ಚಿಸಲು ಸಮಿತಿಯು ಸರಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಬಹುದು.

ಈ ಕಾಯ್ದೆಯ ಮೇರೆಗೆ :

ಅ) ವೇಳೆಗೆ ಅನುಸರಿಸಿ ಕನಿಷ್ಠ ಕೂಲಿಯ ಪಾವತಿ.

ಬ) ಒಪ್ಪಿತ ಸಮಯಕ್ಕೆ ಅನುಸರಿಸಿ ಕೂಲಿಯ ಪಾವತಿ.

ಕ) ವಸ್ತುವಿನ ಉತ್ಪಾದನೆಯನ್ನು ಅನುಸರಿಸಿ ಕೂಲಿಯ ಪಾವತಿ.

ಡ) ಹೆಚ್ಚಿನ ಅವಧಿಯ ಕೆಲಸಕ್ಕೆ ಕನಿಷ್ಠ ಕೂಲಿಯ ಪಾವತಿಯನ್ನು ಮಾಡಬೇಕಾಗುವದು.

ವಿವಿಧ ಉದ್ಯೋಗಗಳಲ್ಲಿ ಪಾವತಿ ಮಾಡಬೇಕಾದ ಕನಿಷ್ಠ ಕೂಲಿಯನ್ನು ನಿಗದಿ ಮಾಡಲು ಈ ಕಾಯ್ದೆಯಿಂದ ರಾಜ್ಯಸರಕಾರಗಳಿಗೆ ಅಧಿಕಾರವಿರುತ್ತದೆ.

ಅಮೇರಿಕಾ ದೇಶದಲ್ಲಿ ಕಾರ್ಮಿಕರ ಹಕ್ಕುಗಳಿಗೆ ಮಾನ್ಯತೆಯನ್ನು ಕೊಡಲಾಗಿರುವದು. "ಫೇರ ಲೇಬರ ಸ್ಟ್ಯಾಂಡಿಂಗ್ ಕಾಯ್ದೆ"ಯನ್ನು ೧೯೩೮ರಲ್ಲಿ ತಿದ್ದುಪಡಿ ಮಾಡಿ ಹೆಚ್ಚಿನ ಅವಧಿಯ ೧ ಗಂಟೆಯ ಕೆಲಸಕ್ಕೆ ಡಾಲರು ಹಣವನ್ನು ನಿರ್ಧರಿಸಲಾಗಿರುವದು. ವಾರದಲ್ಲಿ ೪೦ ತಾಸು ಅವಧಿಯ ವರೆಗೆ ಕೆಲಸ ಮಾಡುವದನ್ನು ಹೇಳಲಾಗಿರುವದು.

ಕರ್ನಾಟಕ ಸರಕಾರವು ಕನಿಷ್ಠ ಕೂಲಿಯ ಪಾವತಿಯ ಬಗೆಗೆ ಕಾಯ್ದೆಯನ್ನು ಮಾಡಿರುತ್ತದೆ. ೧೯೭೩ರಲ್ಲಿ ಈ ಕಾಯ್ದೆಯನ್ನು ಬಳಕೆಯಲ್ಲಿ ತರಲಾಗಿರುವದು. ಬೀಡಿಯ ಕಾರ್ಮಿಕರನ್ನು ಸೇರಿಸಿ ಸುಮಾರು ೫೦ ಲಕ್ಷ ಕಾರ್ಮಿಕರಿಗೆ ಈ ಕಾಯ್ದೆಯು ಅನ್ವಯವಾಗುವದು. ಕಲ್ಲು ಕುಟ್ಟುವದು, ಚರ್ಮವನ್ನು ಹದಗೊಳಿಸುವದು, ಕೈಗಾರಿಕೆ,

ಮುದ್ರಣಾಲಯಗಳಿಗೆ ಕನಿಷ್ಠ ವೇತನವನ್ನು ಗೊತ್ತುಮಾಡಿ ರುವದು ಮುರಿದಿರುವದು.

ಮುದ್ರಣಾಲಯದ ಉದ್ಯೋಗಿಗಳ ಕನಿಷ್ಠ ವೇತನ ಪುನರ್ ವಿಮರ್ಶೆ, ಹೊಲಿಗೆ ಕೈಗಾರಿಕೆ, ಕಾರ್ಮಿಕರಿಗೆ, ಕನಿಷ್ಠ ವೇತನ ಗೊತ್ತು ಮಾಡುವದಕ್ಕೆ ಬೇರೆ ಬೇರೆಯಾದ ಎರಡು ಸಮಿತಿಗಳನ್ನು ರಚಿಸಲಾಗಿರುವದು.

ಹೊಗೆಸೊಪ್ಪು, ಅಕ್ಕಿ, ಎಣ್ಣೆಗಳ ಗಿರಣಿ, ಸಾರಿಗೆ, ಗೋಡಂಬಿ, ಹತ್ತಿ ಸಂಸ್ಕರಣೆ, ಕೃಷಿ ಕಾರ್ಮಿಕರ ಕನಿಷ್ಠ ವೇತನದ ಬಗೆಗೆ ಪುನರ್ವಿಮರ್ಶಿಸಲಾಗುವದು.

ವಸತಿಯುಕ್ತ ಹೊಟೇಲ್, ಉಪಹಾರ ಗೃಹಗಳು ಸಣ್ಣ ಪುಟ್ಟ ಕೆಲಸಗಾರರಲ್ಲಿ ವಿವಿಧ ವರ್ಗಗಳಲ್ಲಿ ವೇತನ ಗೊತ್ತು ಮಾಡಿ ೧೯೭೩ ಜುಲೈ ೧ ರಂದು ಆಜ್ಞೆಯನು ಮಾಡಿರುತ್ತದೆ.

ಹೊಟೇಲ್ ಕೆಲಸಗಾರರನ್ನು ವಯಸ್ಕರು, ತರಬೇತಿ ಯನ್ನು ಪಡೆಯುತ್ತಿರುವವರು, ಅನುಭವಿಗಳು, ಮಕ್ಕಳು ಎಂದು ವಿಭಾಗಿಸಲಾಗಿದೆ. ಪೇಟೆ, ಪಟ್ಟಣಗಳನ್ನು ವರ್ಗೀಕರಣ ಮಾಡಿ, ಬೆಂಗಳೂರು, ಮಂಗಳೂರು, ನಗರ ಸಭಾ ಪ್ರದೇಶ ಗಳನ್ನು "ಅ" ವರ್ಗವೆಂದು, ಮತ್ತು ಇನ್ನುಳಿದ ಜಿಲ್ಲಾ ಕೇಂದ್ರಗಳು, ಮತ್ತು ಕೋಲಾರ ಚಿನ್ನದ ಗಣಿ ಪ್ರದೇಶ ಹರಿಹರ, ಭದ್ರಾವತಿ, ದಾವಣಗೇರಿಗಳನ್ನು "ಬ" ವರ್ಗ

ವೆಂದು, ಇನ್ನುಳಿದ ಇತರ ಎಲ್ಲ ಪ್ರದೇಶಗಳನ್ನು "ಕ" ವರ್ಗವೆಂದು ವಿಂಗಡಿಸಲಾಗಿರುವದು.

ಎಲ್ಲ ಸೌಲಭ್ಯವನ್ನು ಸೇರಿದಂತೆ, ನಿಶ್ಚಯಿಸಲಾದ ಗರಿಷ್ಠ ವೇತನ ೯೭ ರೂಪಾಯಿ ಮತ್ತು ಕನಿಷ್ಠ ವೇತನ ೩೦ ರೂಪಾಯಿ. ಕೆಲಸಗಾರರಿಗೆ ಊಟ ಮತ್ತು ಉಪಚಾರವನ್ನು ಕೊಡುತ್ತಿದ್ದರೆ ಈ ಬಗೆಗೆ ಮುರಿದುಕೊಳ್ಳುವ ಮೊತ್ತವನ್ನು ತಿಳಿಸಲಾಗುವದು

ಒಕ್ಕಲುತನ ಕಾರ್ಮಿಕನಿಗೆ ಕನಿಷ್ಠ ಕೂಲಿ ಪಾವತಿಯನ್ನು ಮತ್ತು ಅವನಿಗೆ ಒದಗಿಸಲಾದ ಕಲ್ಯಾಣ ಕಾರ್ಯವನ್ನು ಬೇರೆ ಅಧ್ಯಾಯದಲ್ಲಿ ವಿವರಿಸಲಾಗುವದು.

**(v) ಉದ್ಯೋಗಿಗಳ ರಾಜ್ಯವಿಮೆಯ ಕಾಯ್ದೆ ೧೯೪೮**

ಈ ಕಾಯ್ದೆಯ ಮೇರೆಗೆ ಉದ್ಯೋಗಿಗಳು, ನೇಮಕದಾರರು, ಸರಕಾರ ಅಂಶದಾನವನ್ನು ನೀಡಬೇಕು. ಉದ್ಯೋಗಪತಿಯು ಉದ್ಯೋಗಿಯಿಂದ ಬರಬೇಕಾದ ಅಂಶದಾನವನ್ನು ಮುರಿದು ಪಾವತಿಯನ್ನು ಮಾಡಬೇಕಾಗುತ್ತದೆ. ಇದಕ್ಕಾಗಿ ರಾಜ್ಯವಿಮೆ ಕಾರ್ಪೋರೇಶನ್ ಅಸ್ತಿತ್ವದಲ್ಲಿ ಬಂದಿರುವದು. ಈ ಕಾರ್ಪೋರೇಶನ್‌ಗೆ ಕೇಂದ್ರ ಮತ್ತು ರಾಜ್ಯ ಸರಕಾರಗಳ ಪ್ರತಿನಿಧಿಗಳು ಸದಸ್ಯರಾಗಿರುವರು.

## vii) ಕೈಗಾರಿಕಾ ವಿವಾದಗಳ ಕಾಯ್ದೆ ೧೯೪೭

ನೇಮಕದಾರರಿಗೂ, ಉದ್ಯೋಗಿಗಳಿಗೂ ನಡುವೆ ವಿವಾದ ಉದ್ಭವಿಸದಂತೆ ಮತ್ತು ಒಂದು ವೇಳೆ ಅಂತಹ ವಿವಾದಗಳು ಉದ್ಭವಿಸಿದರೆ ಅದನ್ನು ತಹಬಂದಿಗೆ ತರುವದು ಈ ಕಾಯ್ದೆಯ ಉದ್ದೇಶವಾಗಿರುವದು.

ಕಾರ್ಮಿಕರನ್ನು ತೆಗೆದುಹಾಕುವದು ಸರ್ವಸಾಮಾನ್ಯವಾಗಿರುತ್ತದೆ. ಸತತವಾದ ಒಂದು ವರುಷದ ಸೇವೆಯನ್ನು ಕಾರ್ಮಿಕನು ಸಲ್ಲಿಸಿದ್ದಾದರೆ ಅವನನ್ನು ಕೆಲಸದಿಂದ ತೆಗೆಯುವದು ಸಾಧ್ಯವಿರುವದಿಲ್ಲ.

ಈ ಕಾಯ್ದೆಯ ಮೇರೆಗೆ ಸೌಲಭ್ಯವನ್ನು ಪಡೆಯಬೇಕಾದರೆ,

೧) ಕಾರ್ಮಿಕನು ತಿಂಗಳಿಗೆ ೫೦೦ ರೂಪಾಯಿಗಿಂತ ಹೆಚ್ಚು ಸಂಬಳವನ್ನು ಪಡೆಯುವಂತಿರಬಾರದು.

೨) ಉದ್ದಿಮೆದಾರನು ಕಾರ್ಮಿಕನಿಗೆ ಕೊಡಬಹುದಾದ ಅನುಕೂಲತೆಯನ್ನು ೨೧ದಿನ ಮುಂಚಿತವಾಗಿ ನೋಟೀಸನ್ನು ಕೊಡದೇ ಬದಲಾವಣೆಯನ್ನು ಮಾಡಿರಬೇಕು.

ಇನ್ನಿತರ ಯಾವದೇ ರೀತಿಯಿಂದ ತಂಟೆಯು ಉದ್ಭವಿಸಿದ್ದಾದರೆ ಕಾರ್ಮಿಕ ಕೋರ್ಟ್, ಕೈಗಾರಿಕಾ ಟ್ರಿಬ್ಯುನಲ್ಸ್, ರಾಷ್ಟ್ರದ ಟ್ರಿಬ್ಯೂನಲ್ಸಕ್ಕೆ ಒಯ್ಯಬಹುದು-

ತಂಟೆಗಳನ್ನು ಬಗೆಹರಿಸುವದಕ್ಕೆ "ಕಾರ್ಮಿಕ ಸಮಿತಿ" ಯನ್ನು ರಚಿಸಬೇಕು. ನೇಮಕದಾರ, ಕಾರ್ಮಿಕ ಎರಡು ಪಕ್ಷಗಳ ಸಮಸಮ ಪ್ರತಿನಿಧಿಗಳು ಈ ಸಮಿತಿಯಲ್ಲಿರ ಬೇಕು. ಕಾರ್ಮಿಕರ ಬಗೆಗೆ ಅಭಿಪ್ರಾಯವನ್ನು ಇದು ವ್ಯಕ್ತ ಪಡಿಸುವದು. ಭಿನ್ನಾಭಿಪ್ರಾಯಗಳನ್ನು ಬಗೆಹರಿಸಲು ಸಮಿತಿಯು ಪ್ರಯತ್ನಿಸುತ್ತದೆ. ತಂಟೆಯು ಬಗೆಹರಿಯದಿದ್ದಾಗ ಸರಕಾರವು ಸಂಧಾನಾಧಿಕಾರಿಯನ್ನು ನೇಮಿಸಬಹುದು. ಇಲ್ಲವೆ ಈ ಕೆಳಗಿನ ಕ್ರಮವನ್ನು ಕೈಕೊಳ್ಳಬಹುದು:

೧) ರಾಜೀಮಂಡಳಿಯೊಂದಕ್ಕೆ ವಿವಾದವನ್ನು ಒಪ್ಪಿಸುವದು.

೨) ವಿವಾದಗಳಿಗೆ ಸಂಬಂಧಿಸಿದ ವಿಷಯಗಳ ಬಗೆಗೆ ವಿಚಾರಣೆಯನ್ನು ನಡೆಸಿ ವರದಿಯನ್ನು ಒಪ್ಪಿಸಲು ವಿಚಾರಣಾಲಯಕ್ಕೆ ಒಪ್ಪಿಗೆಯನ್ನು ಕೊಡುವದು.

೩) ಕೆಲಸಗಾರರ ವಜಾ, ಅವರಿಗೆ ನೀಡಲಾಗಿರುವ ಸೌಲಭ್ಯಗಳನ್ನು ರದ್ದುಪಡಿಸುವದು-ಇಂತಹ ವಿಷಯಗಳನ್ನು ಕಾರ್ಮಿಕ ನ್ಯಾಯಾಲಯಕ್ಕೆ ಒಪ್ಪಿಸುವದು.

೪) ವಿವಾದದ ಬಗೆಗೆ ನ್ಯಾಯ ನಿರ್ಣಯವನ್ನು ನೀಡಲ ನ್ಯಾಯಪೀಠವೊಂದನ್ನು ಒಪ್ಪಿಸುವದು.

ಕಾಯ್ದೆಗೆ ವಿರೋಧವಾಗಿ ಕಾರ್ಖಾನೆಯ ಬೀಗ ಮುದ್ರೆ ಅಥವಾ ಮುಷ್ಕರಕ್ಕೆ ಕಾರಣರಾದವರು ಕಾಯ್ದೆಯ ಮೇರೆಗೆ ಶಿಕ್ಷಾರ್ಹರು.

ಸಾರ್ವಜನಿಕ ಸೇವಾಸಂಸ್ಥೆಯಲ್ಲಿ ಬೀಗಮುದ್ರೆ ಅಥವಾ ಹೊರಗೀಲಿಯನ್ನು ನಿರ್ಬಂಧಿಸಲಾಗಿದೆ.

### viii) ಪ್ರಸೂತಿಯ ಲಾಭದ ಕಾಯ್ದೆ ೧೯೬೧

ಉದ್ಯೋಗಿಗಳ ರಾಜ್ಯವಿಮೆ ಕಾಯ್ದೆಯ ಮೇರೆಗೆ ಯಾವದೇ ಲಾಭವನ್ನು ಪಡೆಯದೇ ಇದ್ದರೆ ಈ ಕಾಯ್ದೆಯ ಮೇರೆಗೆ ಪಡೆಯಬಹುದು. ಈ ಕಾಯ್ದೆಯ ಕೆಲಅಂಶಗಳೆಂದರೆ:

(೧) ಮಹಿಳಾಕಾರ್ಮಿಕಳು ಒಂದು ವರ್ಷದ ಅವಧಿಯಲ್ಲಿ ೧೬೦ ದಿನಗಳವರೆಗೆ ಕಾರಖಾನೆಯಲ್ಲಿ ಸೇವೆಯನ್ನು ಸಲ್ಲಿಸಿರಬೇಕು.

(೨) ಪ್ರಸೂತಿಗಿಂತ ಮುಂಚಿತವಾಗಿ ೬ ವಾರ ಮತ್ತು ಪ್ರಸೂತಿಯ ನಂತರ ೬ ವಾರದ ವರೆಗೆ ಮಹಿಳಾ ಕಾರ್ಮಿಕಳು ಪಗಾರದ ಜೊತೆಗೆ ರಜೆಯನ್ನು ಪಡೆಯಬಹುದು.

(೩) ಮಹಿಳಾ ಕಾರ್ಮಿಕಳು ಒಂದು ವರ್ಷದಲ್ಲಿ ಪಡೆದಿರುವ ಸರಾಸರಿ ಪಗಾರದ ಆಧಾರದ ಮೇಲೆ ರಜೆಯ ದಿನಗಳಲ್ಲಿ ಪಗಾರವನ್ನು ಆಕರಿಸಲಾಗುವದು.

(೪) ಔಷಧೋಪಚಾರಕ್ಕೆ ೨೫ ರೂಪಾಯಿಗಳನ್ನು ಕೊಡ ಲಾಗುವದು.

(೫) ಮಹಿಳಾ ಕಾರ್ಮಿಕಳಿಗೆ ಗರ್ಭಪಾತವಾದರೆ ೬ ವಾರದ ಪಗಾರ ಸಹಿತ ರಜೆಯನ್ನು ಪಡೆಯಬಹುದು.

(೬) ಮಹಿಳಾಕಾರ್ಮಿಕಳು ಪ್ರಸೂತಿಯಿಂದ ಆರುವಾರಗಳ ನಂತರ ಶಾರೀರಿಕವಾಗಿ ದುರ್ಬಲಳಾಗಿದ್ದರೆ ಅವಳಿಗೆ ಒಂದು ತಿಂಗಳು ಪಗಾರ ಸಹಿತ ರಜೆಯನ್ನು ಕೊಡ ತಕ್ಕದ್ದು.

(೭) ಮಗುವು ೧೫ ತಿಂಗಳು ಆಗುವವರೆಗೆ ತಾಯಿಯು ಮಗುವಿಗೆ ಕೆಲಸದ ಅವಧಿಯಲ್ಲಿ ಎರಡು ಸಾರೆ ಹಾಲನ್ನು ಕೊಡುವದಕ್ಕೆ ಉದ್ಯೋಗಪತಿಯು ಅನುವು ಮಾಡಿಕೊಡಬೇಕು.

(೮) ಮಹಿಳಾ ಕಾರ್ಮಿಕಳು ಗರ್ಭಿಣಿಯಿದ್ದಾಗ ಭಾರವಾದ ವಸ್ತುಗಳನ್ನು ಎತ್ತುವ, ಇಳಿಸುವ ಕೆಲಸಕ್ಕೆ ಹಚ್ಚಬಾರದು.

## ಸರಕಾರೀ ಕಲ್ಯಾಣದ ವಿಮರ್ಶೆ

ದೇಶದ ವಿಶಾಲತೆಯನ್ನು ನೋಡಿದಾಗ ಕೇಂದ್ರ ಮತ್ತು ರಾಜ್ಯಸರಕಾರಗಳು ಕೈಗೊಂಡಿರುವ ಕಾರ್ಯವು ಅಲ್ಪವೆಂದು ಹೇಳಬಹುದು. ಮಕ್ಕಳ ವಿದ್ಯಾಭ್ಯಾಸ, ಹೆರಿಗೆಗೆ ಅನುಕೂಲತೆ ಮಹಿಳಾ ವೈದ್ಯರ ಪ್ರಮಾಣಕ್ಕೆ ಅನುಸರಿಸಿ ಇರುವದಿಲ್ಲ. ಅದನ್ನು ಹೋಗಲಾಡಿಸಬೇಕು. ಚರ್ಮದ ವಸ್ತು, ಆಟಿಕೆಯ ವಸ್ತು ಹಾಗೂ

ದುಡಿಮೆಯ ದಿನಗಳು ವ್ಯರ್ಥವಾಗಿರುವವು. ಅದಕ್ಕೆ ಸಂಪು, ಹೊರಗೀಲಿ, ವೇತನಭತ್ಯೆ, ಬೋನಸು. ಸೇವಾಪರಿಸ್ಥಿತಿಗಳಿಗೆ ಸಂಬಂಧವಾಗಿ ಉಂಟಾಗಿರುವ ತಂಟೆಗಳೇ ಕಾರಣವೆನಿಸುತ್ತವೆ. ೧೯೭೩ರಲ್ಲಿ ವ್ಯರ್ಥವಾದ ದಿನಗಳ ಸಂಖ್ಯೆ ನಾಲ್ಕು ದಶಕಕ್ಕಿಂತ ಕಡಿಮೆಯಿದ್ದಿತು.

೧೯೭೪ರಲ್ಲಿ ಖಾಸಗಿ ರಂಗದಲ್ಲಿ ೨೩,೫೬,೨೬೫ ದಿನಗಳ ನಷ್ಟವಾಯಿತು. ೧೯೭೩ರಲ್ಲಿ ಈ ಕ್ಷೇತ್ರದಲ್ಲಿ ವ್ಯರ್ಥವಾದ ದುಡಿಮೆಯ ದಿನಗಳು ೩ ದಶಲಕ್ಷ.

ವೇತನ, ತುಟ್ಟಿಭತ್ಯೆಯ ಸಂದರ್ಭದಲ್ಲಿ ಸರಕಾರೀ ಮತ್ತು ಖಾಸಗೀ ಕ್ಷೇತ್ರಗಳಲ್ಲಿ ತಲೆದೋರಿದ್ದ ವಿವಾದಗಳಿಂದ ೧೯೭೪ರಲ್ಲಿ ೪.೫ ದಶಲಕ್ಷ ದುಡಿಮೆಯ ದಿನಗಳು ವ್ಯರ್ಥವಾದವು. ಇದು ಇಡೀ ವರುಷದಲ್ಲಿಯೆ ಹೆಚ್ಚಿನದು ಎನಿಸಿರುವದು. ಇದು ಶ್ರಮಜೀವಿಗಳ ಕಲ್ಯಾಣದ ಆವಶ್ಯಕತೆಯನ್ನು ಮತ್ತು ಅದರ ತೀವ್ರತೆಯನ್ನು ಎತ್ತಿ ತೋರಿಸುತ್ತದೆ. ಆದುದರಿಂದ ಈ ಕೆಳಗಿನ ಸೂಚನೆಗಳನ್ನು ಪರಿಶೀಲಿಸುವದು ಅಗತ್ಯ :

೧) ಕಾರ್ಮಿಕ ಕಲ್ಯಾಣಕಾರ್ಯವನ್ನು ಕೇಂದ್ರ ಸರಕಾರವು ರಾಜ್ಯಸರಕಾರಗಳ ಜವಾಬ್ದಾರಿಗೆ ಬಿಟ್ಟಿದೆ. ರಾಜ್ಯ ಸರಕಾರದಲ್ಲಿಯೂ ಪ್ರತಿ ಕಾರಖಾನೆಯಲ್ಲಿಯೂ ಒಂದೇ ತೆರನಾದ ಕಾರ್ಯವು ನಡೆದಿರುವದಿಲ್ಲ. ಈ ವಿಧದಲ್ಲಿ ಏಕರೂಪತೆ ಅಳವಡಿಸುವುದು ಸೂಕ್ತ.

೨) ಆರೋಗ್ಯ ಸ್ವಚ್ಛತೆಯ ಕಾಯ್ದೆಗಳನ್ನು ರಚಿಸಿದಾಗ್ಯೂ ಸಮರ್ಪಕವಿಲ್ಲದೇ ಇರುವದು ಕಂಡು ಬಂದಿದೆ. "ಕಾರ್ಮಿಕ ತನಿಖಾ" ಸಂಸ್ಥೆಯು ಅಂತಹ ಕೆಲ ಉದ್ದಿಮೆಗಳಿಗೆ ಭೆಟ್ಟಿಕೊಟ್ಟು ತನ್ನ ವರದಿಯನ್ನು ಸರಕಾರಕ್ಕೆ ಒಪ್ಪಿಸಿದೆ. ಸರಕಾರವು ಈ ವರದಿಯನ್ನು ಪರಿಶೀಲಿಸಿ ಕ್ರಮಕೈಗೊಳ್ಳುವುದಗತ್ಯ.

೩) ಸರಕಾರದಿಂದ ನೇಮಕವಾದ ಕಾರ್ಮಿಕ ಕಲ್ಯಾಣ ಅಧಿಕಾರಿಯು ಅರ್ಹನಾಗಿರಬೇಕಲ್ಲದೇ ಅವನಿಗೆ ಯೋಗ್ಯ ಅನುಭವ ಮತ್ತು ತರಬೇತಿಯನ್ನು ಕೊಟ್ಟಿರಬೇಕು. ಅಲ್ಲದೇ ಅವನಿಗೆ ಯೋಗ್ಯವಾದ ಪಗಾರವನ್ನು ಕೊಡಬೇಕು.

೪) ಶ್ರಮಜೀವಿಗಳ ಕಲ್ಯಾಣವೆಂದರೆ ಕೆಲವರು ಕಾರ್ಮಿಕರನ್ನು ತೃಪ್ತಿಪಡಿಸುವ ವಿಧಾನವೆಂದು ತಿಳಿದಿರುವರು. ಇದು ತಪ್ಪು. ಆದುದರಿಂದ ಕಾಯ್ದೆಯಿಂದಲೇ ಈ ಕಾರ್ಯವನ್ನು ಬಳಕೆಯಲ್ಲಿ ತರಬೇಕಾಗಿರುವದು.

ಕಾರ್ಮಿಕರು ಉದ್ದಿಮೆಯಲ್ಲಿ ನೆಲೆಯಾಗಿ ನಿಂತು ದುಡಿಯದೇ ಇರುವದು, ಕಾರ್ಮಿಕ ಸಂಘಗಳಲ್ಲಿ ಸರಿಯಾದ ವ್ಯವಸ್ಥೆಯಿಲ್ಲದೇ ಇರುವದು, ಅವರಿಗಿರುವ ಹಣದ ಕೊರತೆ, ನಿರಕ್ಷರತೆ ಇವೇ ಮುಂತಾದವು ಶ್ರಮಜೀವಿಗಳ ಪ್ರಮುಖ ಸಮಸ್ಯೆಗಳು. ತೋಟಗಾರಿಕೆಯಲ್ಲಿರುವ ಕಾರ್ಮಿಕರಿಗೆ ನೆಮ್ಮ

ದಿಯ ಜೀವನ ಸಾಗಿಸುವ ಎಲ್ಲ ಸೌಲಭ್ಯಗಳನ್ನೂ ಏರ್ಪ ಡಿಸಬೇಕು. ಇದು ದೇಶದ ಭಾವೈಕ್ಯತೆಗೆ ಹಾಗೂ ಸಮೃದ್ಧ ಜೀವನಕ್ಕೆ ನಾಂದಿಯಾಗುತ್ತದೆ.

## ೬ ಒಕ್ಕಲುತನ ಕಾರ್ಮಿಕರು

ದೇಶದ ಪ್ರಚಲಿತ ಪರಿಸ್ಥಿತಿಯನ್ನು ನೋಡಿದಾಗ,

೧) ಒಕ್ಕಲುತನದ ಕಾರ್ಮಿಕರ ಸಂಖ್ಯೆಯು ಪ್ರತಿವರ್ಷವೂ ಬೆಳೆಯುತ್ತಿರುವದು ಕಂಡು ಬಂದಿದೆ.

(೨) ಒಕ್ಕಲುತನದ ಹುಟ್ಟುವಳಿಗಳಾದ ಕಚ್ಚಾವಸ್ತು ಹಾಗೂ ಆಹಾರಧಾನ್ಯಗಳ ಬೆಲೆ ಏರುತ್ತಿದ್ದು, ಅದರ ಲಾಭಾಂಶವು ಉದ್ಯೋಗಪತಿಗಳಿಗಷ್ಟೇ ತಲುಪುತ್ತಿದೆ.

(೩) ಚಿಕ್ಕ ಹಿಡುವಳಿಗಾರರು ಒಕ್ಕಲುತನವನ್ನು ಸ್ವತಂತ್ರವಾಗಿ ಮಾಡುತ್ತಿಲ್ಲ. ಯಾಕೆಂದರೆ ಅದು ಆರ್ಥಿಕವಾಗಿ ಲಾಭದಾಯಕವಾಗಿಲ್ಲ. ಮತ್ತು ಅಂತಹ ಹಿಡುವಳಿಗಾರರು ಕಾರ್ಮಿಕರಾಗಿ ದುಡಿಯಲು

ಬಯಸುತ್ತಿಲ್ಲ. ಹೀಗೆ ಅಡಕೊತ್ತಿನಲ್ಲಿ ಸಿಕ್ಕ ಅಡಿಕೆಯಂತೆ ಅವರ ಪರಿಸ್ಥಿತಿಯಾಗಿದೆ.

(೪) ಕಾರ್ಮಿಕರಿಗೆ ದೊರೆಯುವ ವೇತನವು ಜೀವನ ನಿರ್ವಹಣೆಗೇ ಸಾಲದೇ ಇರುವದರಿಂದ ಅವರು ತಮ್ಮ ಮನಸ್ಸನ್ನು ಕೇಂದ್ರೀಕರಿಸಿ ಕಾರ್ಯವನ್ನು ಮಾಡುವದು ಸಾಧ್ಯವಾಗುತ್ತಿಲ್ಲ.

(೫) ಜನಸಂಖ್ಯೆಯು ಹೆಚ್ಚಳದಿಂದಾಗಿ ಆಹಾರಧಾನ್ಯದ ಕೊರತೆಯಾಗಿದೆ. ಇದರಿಂದ ದೇಶವು ಪರರಾಷ್ಟ್ರದ ಮೇಲೆ ಅವಲಂಬಿಸಬೇಕಾಗಿರುವದು.

ಅಂತೆಯೇ ದೇಶದಲ್ಲಿಯ ಒಕ್ಕಲುತನದ ಕಾರ್ಮಿಕರ ಕಲ್ಯಾಣವು ನಾಲ್ಕೂ ನಿಟ್ಟಿನಿಂದ ನಡೆಯಬೇಕಾಗಿರುವ ಕಾರ್ಯ. ಒಕ್ಕಲುತನ ಅಭಿವೃದ್ಧಿಗಾಗಿ ಹಾಳಾದ ಮತ್ತು ಬಂಜರು ಭೂಮಿಗಳನ್ನು ಒಕ್ಕಲುತನಕ್ಕೆ ಅಳವಡಿಸುವದು, ವಿವಿಧೋದ್ದೇಶದ ಸಹಕಾರೀಸಂಘಗಳನ್ನು ಸ್ಥಾಪಿಸುವದು ಮುಂತಾದ ಕ್ರಮಗಳನ್ನು ಕೈಕೊಳ್ಳಬೇಕು. ಇದರೊಂದಿಗೆ

(೧) ಒಕ್ಕಲುತನದ ಹುಟ್ಟುವಳಿಯನ್ನು ಹೆಚ್ಚಿಸುವದು, ಮತ್ತು ಅದಕ್ಕೆ ಉಪಕಸಬುಗಳಾದ ಹೈನುಗಾರಿಕೆ, ಪಶು ಸಂಗೋಪನೆ, ಕೋಳಿಸಾಕಣಿಕೆ ಮುಂತಾದವುಗಳಿಗೆ ಉತ್ತೇಜನ ನೀಡಬೇಕು.

(೨) ಹಳ್ಳಿಗಳಲ್ಲಿ ಉದ್ಯೋಗಾವಕಾಶಗಳನ್ನು ಹೆಚ್ಚಿಸುವದಕ್ಕೆ ಚಿಕ್ಕ ಉದ್ದಿಮೆ ಬಹಳ ಸಹಕಾರಿ.

(೩) ಕಾರ್ಮಿಕರಲ್ಲಿ ಆಕಾಂಕ್ಷೆ, ಕಾರ್ಯದಕ್ಷತೆಗಳು ಹೆಚ್ಚಿ ಸಮಾಜದಲ್ಲಿ ಅರ್ಹ ಸ್ಥಾನಮಾನ ದೊರೆಯುತ್ತದೆ.

(೪) ವಿದ್ಯಾಭ್ಯಾಸದ ಅನುಕೂಲತೆಯನ್ನು ಒದಗಿಸುವದು.

(೫) ದೇಶದ ಬೆಳವಣಿಗೆಗೆ ಮಾಡುವ ಖರ್ಚನ್ನು ಒಕ್ಕಲುತನ ಕಾರ್ಮಿಕರ ಇರುವಿಕೆಯ ಬೆಳವಣಿಗೆಗೆ ಉಪಯೋಗಿಸಬೇಕು.

ಭಾರತದಲ್ಲಿರುವ ಒಕ್ಕಲುತನ ಕಾರ್ಮಿಕರನ್ನು ಈ ಕೆಳಗಿನಂತೆ ವಿಭಾಗಿಸಬಹುದು:

(೧) ಜಮೀನುರಹಿತ ಕೂಲಿಕಾರರು.

(೨) ಅರೆವರ್ಗ ಕೂಲಿಕಾರರು. ಉದಾಹರಣೆಗೆ ಕೊಯ್ಯುವವರು, ಬಿತ್ತುವವರು, ಒಕ್ಕುವವರು, ನಟ್ಟು ಕಡಿಯುವವರು ಮುಂತಾದವರು.

(೩) ಕೆಲ ಅವಧಿಯವರೆಗೆ ಮಾತ್ರ ಒಕ್ಕಲುತನದ ಮೇಲೆ ಅವಲಂಬಿಸಿರುವ ಕಾರ್ಮಿಕರು.

ಒಕ್ಕಲುತನದ ಕಾರ್ಮಿಕರಿಗೆ ತಮ್ಮದೇ ಆದ ಕೆಲ ಸಮಸ್ಯೆಗಳು ಇರುವದುಂಟು. ಅಂತಹ ಸಮಸ್ಯೆಗಳೆಂದರೆ

(೧) ಒಕ್ಕಲುತನವು ವರ್ಷದ ಹನ್ನೆರಡೂ ತಿಂಗಳು ನಡೆಯುವ ಉದ್ದಿಮೆಯಾಗಿರುವದಿಲ್ಲ. ಒಂದು ವರುಷದಲ್ಲಿ ಸುಮಾರು ೨೧೮ ದಿನ ಮಾತ್ರ ನಡೆಯುತ್ತದೆ. ಹೀಗಾಗಿ ಕಾರ್ಮಿಕನು ವರುಷದ ಹನ್ನೆರಡು ತಿಂಗಳೂ ಈ ಉದ್ದಿಮೆಯಲ್ಲಿ ದುಡಿಯಲು ಸಾಧ್ಯವಾಗುತ್ತಿಲ್ಲ.

(೨) ಕಾರ್ಮಿಕನಿಂದ ಉದ್ಯೋಗಪತಿಯು ಸೂರ್ಯೋದಯದಿಂದ ಸೂರ್ಯಾಸ್ತದವರೆಗೆ ಕೆಲಸವನ್ನು ಬಯಸುತ್ತಾನೆ.

೩) ಕಾರ್ಮಿಕನ ಮನೆಮಂದಿಯೆಲ್ಲ ಈ ಉದ್ದಿಮೆಯಲ್ಲಿ ದುಡಿಯುವರು.

ಈ ಸಮಸ್ಯೆಗಳನ್ನರಿತು ಕೇಂದ್ರ ಸರಕಾರವು ಕೇಂದ್ರ ಕಾರ್ಮಿಕ ಮಂತ್ರಿ ಶಾಖೆಯ ವತಿಯಿಂದ, ಕಾರ್ಮಿಕರ ಇರುವಿಕೆಯನ್ನು ಅಭ್ಯಸಿಸುವ ಸಲುವಾಗಿ ೧೯೫೦-೫೧ ರಲ್ಲಿ ಸಮೀಕ್ಷೆಯೊಂದನ್ನು ನಡೆಸಿತು. ೧೯೫೮-೫೯ರಲ್ಲಿ ಈ ಸಮೀಕ್ಷೆಯು ಪ್ರಕಟಿಸಲ್ಪಟ್ಟಿತು. ಒಕ್ಕಲುತನದ ಉದ್ಯೋಗದಲ್ಲಿರುವ ಕಾರ್ಮಿಕರು ಪಡೆಯುವ ಕೂಲಿ, ಅವರ ಇರುವಿಕೆ, ಸಾಲ ಮುಂತಾದವುಗಳನ್ನು ಅಭ್ಯಸಿಸಿ, ಅವರಿಗೆ ಯಾವ ರೀತಿಯ ಸಂರಕ್ಷಣೆಯನ್ನು ಕೊಡಬೇಕು ಎಂಬುದನ್ನು ವಿವರಿಸಿತು. ಮತ್ತು ಅವರಿಗೆ ಕನಿಷ್ಠ ಕೂಲಿಯ ಪಾವತಿಯನ್ನು ಮಾಡುವದಕ್ಕೆ ಹೇಳಿತು. ಈ ಸಮೀಕ್ಷೆ

ಯನ್ನು ಆಯ್ದ ೮೧೨ ಹಳ್ಳಿಗಳಲ್ಲಿ ಕೈಗೊಳ್ಳಲಾಗಿದ್ದಿತು.

"ಇಂಡಿಯನ್ ಸ್ಟೇಟಿಸ್ಟಿಕಲ್ ಇನ್ಸಿಟಿಟ್ಯೂಟ್" ೧೯೫೬-೫೭ ರಲ್ಲಿ ಆಯ್ದ ಸುಮಾರು ೩೬೦೦ ಹಳ್ಳಿಗಳ ಸಮೀಕ್ಷೆಯನ್ನು ಕೈಕೊಂಡಿದ್ದಿತು.

ಭೂಹೀನ ವ್ಯವಸಾಯ ಕಾರ್ಮಿಕರ ಸಂಖ್ಯೆಯು ದೇಶದ ಒಟ್ಟು ಕಾರ್ಮಿಕರಲ್ಲಿ ಶೇ. ೨೫ ಇದ್ದರೂ ಅವರು ಸ್ವಾತಂತ್ರ್ಯ ಪೂರ್ವದಲ್ಲಿದ್ದಂತೆಯೇ ಇಂದಿಗೂ ಕಡೆಗಣಿಸಲ್ಪಟ್ಟಿದ್ದಾರೆ.

ಕೇಂದ್ರದ ಆಡಳಿತಕ್ಕೆ ಒಳಪಟ್ಟ ಕಾರ್ಮಿಕ ಕಲ್ಯಾಣ ಯೋಜನೆಯನ್ನು ವ್ಯವಸಾಯ ಕಾರ್ಮಿಕರಿಗೂ ವಿಸ್ತರಿಸುವ ಬಗೆಗೆ ರಾಷ್ಟ್ರೀಯ ಕಾರ್ಮಿಕ ಆಯೋಗವು ಪರಿಶೀಲಿಸಲಿಲ್ಲ. ಇದು ರಾಜ್ಯದ ಹೊಣೆಯೆಂದುಕೊಂಡು ಸುಮ್ಮನಾಗಿದೆ. ಎಂದೇ ಕೇಂದ್ರ ಕಾರ್ಮಿಕ ಸಚಿವಾಲಯ ವ್ಯವಸಾಯ ಕಾರ್ಮಿಕ ಇಲಾಖೆಯನ್ನು ತೆಗೆದುಹಾಕಿದೆ.

ಇದೀಗ ಕಾರ್ಮಿಕ ಮತ್ತು ಉದ್ಯೋಗ ಇಲಾಖೆಯು ನೇಮಿಸಲಿರುವ ವಿಭಾಗವು ತಜ್ಞರ ಸಮಿತಿಯಿದ್ದು ಅದು ಕಾರ್ಮಿಕರ ಬಗೆಗೆ ಕೂಲಂಕಷವಾಗಿ ವಿಚಾರಣೆಯನ್ನು ನಡೆಸುವುದೆಂದು ಅಪೇಕ್ಷಿಸಲಾಗಿದೆ.

ಕೇಂದ್ರ ಸಲಹಾ ಸಮಿತಿಯ ಸಲಹೆಯನ್ನು ಯೋಜನಾ ಆಯೋಗವು ಮಾನ್ಯ ಮಾಡಿ ಸುಮಾರು ೭ ಲಕ್ಷ ವಸತಿ ಹೀನ ಒಕ್ಕಲುತನದ ಕಾರ್ಮಿಕರಿಗಾಗಿ ೫ ಕೋಟಿ ರೂಪಾಯಿ ಯಷ್ಟು ಹಣವನ್ನು ವಿನಿಯೋಗಿಸಿತು. ತೃತೀಯ ಪಂಚವಾರ್ಷಿಕ ಯೋಜನೆಯಲ್ಲಿ ಸುಮಾರು ೧೫೦ ಕೋಟಿ ರೂಪಾಯಿಗಳನ್ನು ವಿನಿಯೋಗಿಸಲಾಯಿತು.

ಸಂತ ವಿನೋಬಾಭಾವೆಯವರ ಭೂದಾನ ಯಜ್ಞದ ಅಂಗವಾಗಿ ದೊಡ್ಡ ದೊಡ್ಡ ಜಮೀನುದಾರರು ತಮ್ಮ ಜಮೀನದ ಕೆಲ ಭಾಗವನ್ನು ಭೂರಹಿತ ಕಾರ್ಮಿಕರಿಗೆ ಕೊಟ್ಟಿರುವದನ್ನು ಇಲ್ಲಿ ಸ್ಮರಿಸಬಹುದು.

ಕರ್ನಾಟಕ ರಾಜ್ಯದಲ್ಲಿಯೂ ಒಕ್ಕಲುತನಕ್ಕೆ ಕನಿಷ್ಠ ಕೂಲಿಯ ಪಾವತಿಯನ್ನು ಮಾಡುವದಕ್ಕೆ ಸರಕಾರವು ಶಾಸನವನ್ನು ಮಾಡಿರುವದುಂಟು. ಒಕ್ಕಲುತನದ ಕಾರ್ಮಿಕರ ಒಂದನೆಯ ವರ್ಗದ ದುಡಿಮೆಗೆ ಕನಿಷ್ಠ ವೇತನ ರೂ. ೩.೨೫ ಯೆಂದು ನಿರ್ಧರಿಸಲಾಗಿದೆ. ನೀರಾವರಿಯ ಸೌಲಭ್ಯವಿರುವಲ್ಲಿ ಕನಿಷ್ಠ ವೇತನ ರೂ. ೩.೨೫ಯೆಂದು ನಿರ್ಧರಿಸಲಾಗಿದೆ.

ಕಾರ್ಮಿಕ ಕೌನ್ಸಿಲ್ ಈ ಕಾಯ್ದೆಯನ್ನು ನೋಡಿಕೊಂಡು ಹೋಗುತ್ತದೆ. ಉದ್ಯೋಗಪತಿಯಿಂದ ಕಡಿಮೆ ಕೂಲಿಯ ಪಾವತಿಯಾಗದಂತೆ ತಡೆಯುತ್ತದೆ. ಮತ್ತು

ಅವರ ಕೂಲಿಯಲ್ಲಿ ಯಾವದೇ ಕಡಿತವಾಗದಂತೆ ನೋಡಿ ಕೊಳ್ಳುತ್ತದೆ. ಅಂತಹ ಪರಿಸ್ಥಿತಿಯಲ್ಲಿ ಉದ್ಯೋಗಪತಿಗೆ ದಂಡವನ್ನು ವಿಧಿಸಬಹುದು.

ಇಂಗ್ಲಂಡ ದೇಶದಲ್ಲಿ ಒಕ್ಕಲುತನ ಕೂಲಿಯ ಕಾಯ್ದೆ ಗಳಲ ರಂತೆ ಸ್ಥಾಯೀ ಸಮಿತಿಯು ಕೂಲಿಯನ್ನು ನಿರ್ಧರಿಸಬಹುದು. ಆದರೆ ಈ ಸೂಚನೆಯನ್ನು ಒಕ್ಕಲುತನ ಕೂಲಿ ಸಮಿತಿಯ ಮುಂದೆ ಒಯ್ಯುವದು ಅವಶ್ಯವಿರುವದು. ಅವರ ಕನಿಷ್ಠ ಕೂಲಿಯನ್ನು ನಿರ್ಧರಿಸಲಾಗಿದೆ. ಮತ್ತು ನಿರ್ದಿಷ್ಟ ಅವಧಿಯು ಮುಗಿದ ನಂತರ ಹೆಚ್ಚಿಗೆ ಕೆಲಸವನ್ನು ಮಾಡಿದರೆ, ಆ ಹೆಚ್ಚಿನ ಶ್ರಮಕ್ಕೆ ಕೂಲಿಯನ್ನು ನಿರ್ಣಯಿಸ ಲಾಗುವದು.

ಒಕ್ಕಲುತನ ಕಾರ್ಮಿಕರಿಗೆ ಕನಿಷ್ಠ ಕೂಲಿಯು ಪಾವ ತಿಯನ್ನು ನಿರ್ಧರಿಸಲು ಅನೇಕ ತೊಂದರೆಗಳು ಇರುವದುಂಟು.

೧) ಕಾರ್ಮಿಕರಿಗೆ ಕೂಲಿ ಪಾವತಿಯಾಗಿರುವ ಸಮೀಕ್ಷೆಯ ವರದಿ ಪ್ರಕಾರ ಅತೀ ಸ್ವಲ್ಪವಿರುತ್ತದೆ. ಅದೂ ರಾಷ್ಟ್ರದ ಕೆಲ ಪ್ರದೇಶಕ್ಕೆ ಮಾತ್ರ ಸೀಮಿತವಾಗಿ ರುತ್ತದೆ

(೨) ದಿನದ ಕೆಲಸದ ಅವಧಿಯನ್ನು ನಿರ್ಧರಿಸುವುದು ಅತಿ ಕಠಿಣ. ಯಾಕೆಂದರೆ ಕೆಲಸದ ಅವಧಿಯು ಮಳೆ ಯಾಗುವ ಸಮಯ, ಒಕ್ಕಲುತನದ ಕಾಲ, ಪೀಕನ್ನು

ಕೊಯ್ಯುವದು, ಕೊರೆಯುವದು ಮುಂತಾದವುಗಳ ಮೇಲೆ ಅವಲಂಬಿಸಿರುತ್ತದೆ.

(೩) ಹಳ್ಳಿಗಳಲ್ಲಿ ಕೊಡುವ ಕೂಲಿಯು ಸಾಮಾನ್ಯವಾಗಿ ವಸ್ತುವಿನ ರೂಪವಾಗಿಯೋ ಅಥವಾ ಆಹಾರ ಧಾನ್ಯದ ರೂಪವಾಗಿಯೊ ಇರುವದುಂಟು. ಹಣದ ರೂಪದಲ್ಲಿ ಕೊಡುವದು ಕಡಿಮೆ. ಅಂತಹ ವಸ್ತು ಅಥವಾ ಆಹಾರ ಧಾನ್ಯದ ಬೆಲೆಯನ್ನು ಇಡೀ ರಾಜ್ಯದಲ್ಲಿ ವ್ಯಾಪಕವಾಗಿ ಇಂತಿಷ್ಟೇ ಎಂದು ನಿರ್ಧರಿಸುವದು ಕಠಿಣವೆನಿಸುವದು.

(೪) ಚಿಕ್ಕ ಹಿಡುವಳಿದಾರರು ಕನಿಷ್ಠ ಕೂಲಿ ಪಾವತಿಯ ಲೆಕ್ಕವನ್ನು ಇಡುವದು ಅವರಿಗೆ ಕಠಿಣವೆನಿಸುವದು. ಅವರಿಗೆ ಅಕ್ಷರಾಭ್ಯಾಸವು ಇರುವದು ಕಡಿಮೆ. ಆದ್ದರಿಂದ ಕಾಯ್ದೆಗೆ ಅನುಸರಿಸಿ ಇಡಬೇಕಾಗುವ ರಿಕಾರ್ಡು, ರಜಿಸ್ಟರ ಮುಂತಾದ ಲೆಕ್ಕ ಪತ್ರವನ್ನು ಕಾಯ್ದುಕೊಂಡು ಹೋಗುವದು ಕಠಿಣವಾಗುವದು.

ಅಂತೆಯೇ ಈ ಕಾಯ್ದೆಯು ರೂಪುಗೊಂಡು ಬಳಕೆಯಲ್ಲಿ ಬರುವದನ್ನು ಬಹಳ ದಿನಗಳವರೆಗೆ ತಡೆಹಿಡಿಯಲಾಗಿದ್ದಿತು. ಕೆಲರಾಜ್ಯಗಳು ಈ ಕಾಯ್ದೆಯನ್ನು ಕೆಲನಿರ್ದಿಷ್ಟಪಡಿಸಿದ ವಿಭಾಗದಲ್ಲಿ ಮಾತ್ರ ಬಳಕೆಯಲ್ಲಿ ತಂದಿರುವವು.

## ೭ ಯಾರ ಹೊಣೆಗಾರಿಕೆ?

ಭಾರತದ ಶ್ರಮಜೀವಿಗಳನ್ನು ಪರರಾಷ್ಟ್ರದೊಡನೆ ಹೋಲಿಸಿದಾಗ ಇಲ್ಲಿರುವ ಕಾರ್ಯವು ತೃಣಸಮಾನವೆಂದು ಹೇಳಬಹುದು. ಮತ್ತು ರಾಷ್ಟ್ರೀಯ ಸಂಪತ್ತನ್ನು ಬೆಳಸಬೇಕು ಎನ್ನುವ ಭಾವನೆಯೂ ಕಡಿಮೆಯಿರುತ್ತದೆ.

ಜಪಾನ ದೇಶದ ಉದಾಹರಣೆಯನ್ನು ನಾವು ಕೊಡುವದಾದರೆ, ಅಲ್ಲಿಯ ಕೆಲಸಗಾರರು ಹೆಚ್ಚಾಗಿ ತಮಗೆ ಸಿಗುವ ವಾರ್ಷಿಕ ರಜೆಗಳನ್ನು ತೆಗೆದುಕೊಳ್ಳದೆ ಇರುವದು ಸರಕಾರಕ್ಕೆ ತಲೆನೋವಾಗಿರುವದು. ದೇಶದ ಕಾರ್ಮಿಕರ ಐದನೆಯ ಒಂದು ಭಾಗ ಮಾತ್ರ ತಮ್ಮ ವಾರ್ಷಿಕ ರಜೆಯನ್ನು ಪೂರ್ಣವಾಗಿ ಬಳಸುತ್ತಾರೆ. ಅಂತಹ ರಜಾದಿನಗಳನ್ನು ಮದುವೆ, ಮರಣ ಮತ್ತು ಅನಾರೋಗ್ಯದ ಬಗೆಗೆ ಮಾತ್ರ ಬಳಸುತ್ತಾರೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿಯಂತೆ ವಿಹಾರಕ್ಕೆ

ಉಪಯೋಗಿಸುವದಿಲ್ಲ. ಜಪಾನಿನ ಕೆಲಸಗಾರರು ವಾರದಲ್ಲಿ ಐದು ದಿನಗಳು ಮಾತ್ರ ದುಡಿಯುತ್ತಾರೆ. ಸರಕಾರದ ಆದೇಶದ ಮೇರೆಗೆ ಕೈಗಾರಿಕೆ ಸಂಸ್ಥೆಗಳು ತಮ್ಮ ಕೆಲಸಗಾರರು ರಜಾ ಪಡೆಯುವಂತೆ ಪ್ರಚೋದಿಸುತ್ತಿರುವರು.

೧೯೭೧ ನೆಯ ಸಾಲಿನಲ್ಲಿ ೩೦ ಮಂದಿಗಿಂತ ಹೆಚ್ಚು ಕೆಲಸಗಾರರು ಇರುವ ಸಂಸ್ಥೆಗಳಲ್ಲಿ ಶೇ. ೪೪ ರಷ್ಟು ವಾರಕ್ಕೆ ಐದು ದಿನಗಳ ದುಡಿಮೆಯನ್ನು ಗೊತ್ತು ಮಾಡಿರುತ್ತಾರೆ. ಸುಮಾರು ಶೇ. ೩೦ ರಷ್ಟು ಸಂಸ್ಥೆಯಲ್ಲಿ ಒಟ್ಟು ಒಂದು ವಾರದಲ್ಲಿ ಐದು ದಿನಗಳ ಕೆಲಸವನ್ನು ತೆಗೆದುಕೊಳ್ಳಲಾಗುತ್ತದೆ.

ಆದುದರಿಂದ ಭಾರತೀಯ ಕಾರ್ಮಿಕರಲ್ಲಿ ಉತ್ಪಾದಕ ಶಕ್ತಿಯನ್ನು ಬೆಳೆಸಿ, ದೇಶದ ಸಂಪತ್ತನ್ನು ಹೆಚ್ಚಿಸಬೇಕಾದರೆ ಕೈಗೊಂಡ ಕಲ್ಯಾಣ ಕಾರ್ಯವು ವ್ಯಾವಹಾರಿಕವಾಗಿ ಕಾರ್ಮಿಕರಿಗೆ ಸಮರ್ಪಕವಾಗಿ ದೊರೆಯುವಂತಾಗಬೇಕು.

ಇಲ್ಲಿ ಶ್ರಮಜೀವಿಗಳ ಕಲ್ಯಾಣವು ಯಾರ ಹೊಣೆಯೆಂಬ ಪ್ರಶ್ನೆ ಬರುತ್ತದೆ. ಉದ್ಯೋಗಪತಿಯು ಸರಕಾರದ ಕಡೆಗೆ ಬೊಟ್ಟು ಮಾಡಿ ತೋರಿಸುವದಾಗಲೀ, ಅಥವಾ ಕೇಂದ್ರ ಸರಕಾರವು ರಾಜ್ಯ ಸರಕಾರದ ಮೇಲೆಯಾಗಲೀ, ರಾಜ್ಯ ಸರಕಾರವು ಕೇಂದ್ರ ಸರಕಾರದ ಮೇಲಾಗಲೀ, ಹೀಗೆ ಒಬ್ಬರ

ಮೇಲೊಬ್ಬರು ತಮ್ಮ ಜವಾಬ್ದಾರಿಯನ್ನು ಹಾಕುವದು ಅಥವಾ ಒಬ್ಬರಿಂದ ಮತ್ತೊಬ್ಬರು ನುಸುಳಿಕೊಳ್ಳುವದು ಸರ್ವಥಾ ಯೋಗ್ಯವೆನಿಸದು.

ಇದೊಂದು ಬೃಹತ್ ಸಮಸ್ಯೆಯಾಗಿದೆ. ಈ ಕಾರ್ಯವು ವ್ಯಕ್ತಿಗತವಾಗಿ ಯಾರೊಬ್ಬರ ಜವಾಬ್ದಾರಿಯಾಗಿರದೇ, ಉದ್ದಿಮೆದಾರ, ಕಾರ್ಮಿಕ ಸಂಘ, ಕೇಂದ್ರ ಮತ್ತು ರಾಜ್ಯ ಸರಕಾರಗಳ ಸಂಯುಕ್ತ ಹೊಣೆಯಾಗಿರುತ್ತದೆ.

ಉದ್ಯೋಗಪತಿಯು ಕಾರ್ಮಿಕನಿಗೆ ಉಪಹಾರ, ವೈದ್ಯಕೀಯ ಸೌಲಭ್ಯ, ಮಕ್ಕಳಿಗಾಗಿ ದಾದಿಯರು, ಮನ ರಂಜನೆಯ ಅನುಕೂಲತೆಯನ್ನು ಒದಗಿಸಬೇಕು.

ಸರಕಾರವು ಕಾರ್ಮಿಕರನ್ನು ಸುಧಾರಿಸಬೇಕು. ಅವರಿಗೆ ವೈದ್ಯಕೀಯ ಚಿಕಿತ್ಸೆ, ವಸತಿ ಸೌಕರ್ಯ, ಸಾಮಾಜಿಕ ವಿಮೆ, ವಿದ್ಯಾಭ್ಯಾಸ ಮುಂತಾದವುಗಳಿಗೆ ಬೇಕಾಗುವ ಹಣದ ಅನುಕೂಲತೆ ಮತ್ತು ಸೌಕರ್ಯಗಳನ್ನು ಒದಗಿಸಬೇಕು.

ಕಾರ್ಮಿಕ ಸಂಘಗಳು ಪಾಶ್ಚಾತ್ಯ ದೇಶದಲ್ಲಿ ಹೆಚ್ಚಿನ ಆಸ್ಥೆ ಯಿಂದ ಕಾರ್ಮಿಕರ ಪ್ರಗತಿಗಾಗಿ ದುಡಿಯಬೇಕು. ಅಂತೆಯೇ ಕಾರ್ಮಿಕರ ಕುಟುಂಬ, ನಿತ್ಯಜೀವನದ ಆರೋಗ್ಯ ಮತ್ತು ಅವರ ವಸತಿಯ ಪ್ರದೇಶದ ಸ್ವಚ್ಛತೆಗೆ ಗಮನಕೊಟ್ಟು

ಅವರಲ್ಲಿ ಪರಸ್ಪರ ಸಹಕಾರ ಮನೋಭಾವ, ನೈರ್ಮಲ್ಯ ಪ್ರಜ್ಞೆ ಮೂಡುವಂತೆ ಸುಸಂಘಟಿತರಾಗಿ ದುಡಿಯಬೇಕು.

ಶ್ರಮಜೀವಿಗಳ ಕಲ್ಯಾಣವೆಂದರೆ, ಕಾರ್ಮಿಕರಿಗೆ ಬೇಕಾಗುವ ಜೀವನಾವಶ್ಯಕವಾದ ಕೆಲ ಅನುಕೂಲತೆಯನ್ನಷ್ಟೇ ಮಾಡುವುದಲ್ಲ. ಅದರ ಜೊತೆಗೆ ಇಂದಿನ ಬದಲಾದ ಜಗತ್ತಿನಲ್ಲಿ ನೂತನವಾದ ಕಲ್ಯಾಣ ಕಾರ್ಯಗಳನ್ನು ಕೈಗೊಳ್ಳಬೇಕು.

ದಿನವೆಲ್ಲ ದುಡಿದು ಬೇಸರಗೊಂಡ ಕಾರ್ಮಿಕನ ಮನಸ್ಸಿಗೆ ಉಲ್ಲಾಸ ನೀಡುವಂಥ ಸಾಂಸ್ಕೃತಿಕ ಕೇಂದ್ರಗಳನ್ನು ತೆರೆಯ ಬೇಕು. ಅವನು ನೆಮ್ಮದಿಯ ಜೀವನ ಸಾಗಿಸುವಂತೆ ತನ್ಮೂಲಕ ದೇಶದ ಅಭಿವೃದ್ಧಿಗೆ ನೆರವಾಗುವಂತೆ ಮಾಡುವಲ್ಲಿ ಉದ್ಯೋಗ ಪತಿ ಹಾಗೂ ಸರಕಾರ ಸಹಕಾರ ಮನೋಭಾವದಿಂದ ಕರ್ತವ್ಯ ಪ್ರಜ್ಞೆಯಿಂದ ದುಡಿಯಬೇಕಾಗಿದೆ.

# ಗ್ರಂಥಋಣ


1) Labour Problems and Social Welfar
—**R. C. Saxen**

2) Labour Problems and Social Welfar
in India —**Dr. Mamoria & Dosh**

3) ಮೈಸೂರು ಕಾರ್ಮಿಕ ಪತ್ರಿಕೆ, ೧೯೭೩ರ, ಜನೇವರಿ
ಎಪ್ರಿಲ್, ಜೂನ, ಜುಲೈ, ಆಗಸ್ಟ, ಸಪ್ಟಂಬರ
ಅಕ್ಟೋಬರ, ನವ್ಹಂಬರ, ಡಿಶೆಂಬರ ತಿಂಗಳ ಸಂಚಿ
ಗಳು.

4) Economic of Labour and Socia
Welfare —**Dr. T. N. Bhagoriwa**

5) Report of the Study Group on Iro
and Steel Industry — **National
Commission on Labour, Govern
ment of India**

# ಉಪನ್ಯಾಸ ಗ್ರಂಥಮಾಲೆಯ

## ಇತ್ತೀಚಿನ ಪ್ರಕಟನೆಗಳು

**ಬೆಲೆ : ಪ್ರತಿ ಒಂದಕ್ಕೆ ೨೫ ಪೈಸೆ**

೧. ನವಭಾರತ ನಿರ್ಮಾಪಕ
ರಾಜಾರಾಮ ಮೋಹನರಾಯ್ — ಜಿ. ಜಿ. ಕಾಡದೇವರ
೨. ಭಾರತೀಯ ಸಂವಿಧಾನದಲ್ಲಿ
ಮೂಲಭೂತ ಹಕ್ಕುಗಳು — ಶಿವಾನಂದ ಗುಬ್ಬಣ್ಣವರ
೩. ಭಾರತದ ಆರ್ಥಿಕ ಬೆಳವಣಿಗೆಯ
ಗುಣದೋಷಗಳು — ಡಿ. ಎ. ಹೆಗಡೆ
೪. ಸಸ್ಯಪೋಷಕಗಳು — ಸಾ. ನಾ. ವಜ್ರನಾಭಯ್ಯ
೫. ಕೌಟಿಲ್ಯನ ಅರ್ಥಶಾಸ್ತ್ರ — ಅರವಿಂದ ಜೋಶಿ
೬. ಮೊಹರ್ರಂ ಪದಗಳು — ಚೆನ್ನಣ್ಣ ವಾಲೀಕಾರ
೭. ಬಳ್ಳಾರಿ ಜಿಲ್ಲೆಯ ಶಿವಶರಣರು — ಶಾಂತರಸ
೮. ಸಕ್ಕರೆ ರೋಗ — ಪಿ. ಎಸ್. ಶಂಕರ್
೯. ಕಳೆ ನಿಯಂತ್ರಣ — ಎಂ. ಎಂ. ಹೊಸಮನಿ
೧೦. ನಮ್ಮ ದೇಶದಲ್ಲಿ ಬಡತನ
ಹಾಗೂ ಅದರ ನಿವಾರಣೆ — ಎಂ. ಸಿ. ಕೊಡ್ಲಿ

---

ಪ್ರಸಾರಾಂಗ ವಿಸ್ತರಣ ಮತ್ತು ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ—೩